# ನಿಶ್ಚಿತಾರ್ಥ

ಅಥವಾ

## ಭರಚುಕ್ಕಿ

(ಏಕಾಂಕ ದೃಶ್ಯ)


ಲೇಖಕರು

ಶ್ರೀ. ಕ್ಷೀರಸಾಗರ



ಪ್ರಕಾಶಕರು

**ಸತ್ಯಶೋಧನ ಪ್ರಕಟನಮಂದಿರ**
**ಕೋಟೆ, ಬೆಂಗಳೂರು ನಗರ**

೧೯೪೫

ಪ್ರಥಮ ಮುದ್ರಣ : ೧೦೦೦ ಪ್ರತಿಗಳು



**ರಾಯಲ್ಟಿ :**
ಪ್ರದರ್ಶನವೊಂದಕ್ಕೆ **ರೂ. ೧೦**

**ಬೆಲೆ :**
ಹನ್ನೆರಡಾ

ಈ ನಾಟಕದ ಪ್ರಥಮ ಪ್ರದರ್ಶನವು ಬೆಂಗಳೂರಿನಲ್ಲಿ ವಿಶ್ವ ವಿದ್ಯಾನಿಲಯ ಸಂಘದ ೧೯೪೦-೪೧ ನೆಯ ವಾರ್ಷಿಕೋತ್ಸವ ಕಾಲದಲ್ಲಿ ನಡೆಯಿತು.

ವಾಚನದ ವ್ಯಾಪ್ತಿ ಸುಮಾರು ೭೫ ನಿಮಿಷ.
ಪ್ರದರ್ಶನದ ವ್ಯಾಪ್ತಿ ಸುಮಾರು ೧೦೦ ನಿಮಿಷ.

# ಮುನ್ನುಡಿ

ಕನ್ಯೆಯನ್ನು ನೋಡುವುದಕ್ಕೆ ಹೋದ ವರನು, ಮಾವನ ಮನೆಯನ್ನು ಹೊಟೇಲೆಂದು ಭ್ರಮಿಸಿದ ಸನ್ನಿವೇಶವು ಇಂಗ್ಲಿಷ್ ಸಮಾಜದಲ್ಲಿ ಹೇಗೆ ಇರಬಹುದು ಎಂಬುದನ್ನು ಆಲಿವರ್ ಗೋಲ್ಡ್ ಸ್ಮಿತ್ ಕವಿಯು ತನ್ನ 'ಷಿ ಸ್ಟೂಪ್ಸ್ ಟು ಕಾನ್‌ಕರ್' ಎಂಬ ನಾಟಕದಲ್ಲಿ ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ. ಅದೇ ಸನ್ನಿವೇಶವು ನಮ್ಮ ಸಮಾಜದಲ್ಲಿ ಹೇಗೆ ಇದ್ದೀತು ಎಂಬುದನ್ನು ಚಿತ್ರಿಸಬೇಕೆಂಬ ಕುತೂಹಲವು ನನ್ನ ಮನಸ್ಸಿನಲ್ಲಿ ಬಹಳ ಕಾಲದಿಂದ ಇದ್ದು, ಬೆಂಗಳೂರಿನ ವಿಶ್ವವಿದ್ಯಾನಿಲಯ ಸಂಘದ ೧೯೪೦-೪೧ನೆಯ ವಾರ್ಷಿಕೋತ್ಸವ ಕಾಲದಲ್ಲಿ ಈ ನಾಟಕ ರೂಪವಾಗಿ ಫಲಿಸಿತು.

ನಮ್ಮ ಸಮಾಜದ ಕಟ್ಟುಗಳು, ನಮ್ಮ ದೈನಂದಿನ ಪದ್ಧತಿಗಳು, ನಮ್ಮ ಜೀವನದ ವಿನೋದಕರವಾದ ಸನ್ನಿವೇಶಗಳು, ನಮ್ಮ ಭಾಷೆಯ ಲಘು ಹಾಸ್ಯ, ಇವು ಇಂಗ್ಲಿಷ್ ನಮೂನೆಯಿಂದ ಬೇರೆಯಾಗದೆ ಇದ್ದಿದ್ದರೆ, ಆಗ ಆ ಇಂಗ್ಲಿಷ್ ನಾಟಕದ ನೇರವಾದ ತರ್ಜುಮೆಯು ಸಾಕಾಗುತ್ತಿತ್ತು. ಆದರೆ ನಮಗೆ ಅಂಥ ಭಾಷಾಂತರವು ಹೊಂದುವುದಿಲ್ಲ. ಈ ಕಾರಣದಿಂದ ಪಾತ್ರಗಳಲ್ಲೂ, ಕಥೆಯಲ್ಲೂ ಸಂಭಾಷಣೆಗಳಲ್ಲೂ ದೊಡ್ಡದೊಡ್ಡ ಬದಲಾವಣೆಗಳು ಆವಶ್ಯಕವಾದವು. ಅಲ್ಲದೆ ಈ ಬದಲಾವಣೆಗಳನ್ನು ಮಾಡಿದ ಮೇಲೆ ಬಂದ ಆಕೃತಿಯ ಪರಿಪೂರ್ಣತೆಗಾಗಿ ಕೆಲವು ಅಂಶಗಳನ್ನು ಸೇರಿಸಬೇಕಾಯಿತು; ಮತ್ತೆ ಕೆಲವನ್ನು ತೆಗೆದುಹಾಕಬೇಕಾಯಿತು. ಒಂದು ವಿಗ್ರಹವನ್ನು ತೆಗೆದುಕೊಂಡು ಅದನ್ನು ಇನ್ನೊಂದು ವಿಗ್ರಹವನ್ನಾಗಿ ಮಾರ್ಪಡಿಸಿ ಕಡೆಯುವಾಗ ಆಗುವಂತೆ, ಈ ರೂಪಾಂತರದಲ್ಲಿ ಮೂಲವಿಗ್ರಹದ ಕೆಲವು ಅಂಗಗಳು ನಾಯವಾಗಿ ಮತ್ತೆ

ಕೆಲವು ಸೇರಿಸಲ್ಪಟ್ಟಿವೆ, ಕೆಲವು ಅಂಗಗಳ ಭಂಗಿ ವ್ಯತ್ಯಾಸವಾಗಿದೆ, ಮತ್ತೆ ಕೆಲವು ಅಂಗಗಳು ಸ್ವಲ್ಪ ಹೆಚ್ಚು ಕಡಮೆ ಹಾಗೆಯೇ ಉಳಿದುಕೊಂಡಿವೆ.

ಈ ನಾಟಕದ ಪ್ರಥಮ ಪ್ರದರ್ಶನವು ಮೇಲೆ ಹೇಳಿದ ವಾರ್ಷಿಕೋತ್ಸವ ಕಾಲದಲ್ಲಿ, ಬೆಂಗಳೂರಿನ ಪುರಭವನದಲ್ಲಿ ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರ ಅಧ್ಯಕ್ಷತೆಯಲ್ಲಿ ನಡೆಯಿತು. ಅಂದು ಆಡಿದವರೂ ನೋಡಿದವರೂ ವಿದ್ಯಾವಂತರು, ಮೇಲಾಗಿ ರಸಿಕರು. ಅಂದಿನ ನಾಟಕ ಪ್ರದರ್ಶನದ ಸವಿನೆನಪು ನನ್ನ ಮನಸ್ಸಿನಲ್ಲಿ ಎಂದಿಗೂ ನಿಲ್ಲುವುದಾಗಿದೆ.

ಬೆಂಗಳೂರು
ನೊವೆಂಬರ್, ೧೯೪೫

ಕ್ಷೀರಸಾಗರ

# ಸಿದ್ಧತೆ

---

## ಪಾತ್ರವಿವರ

೧. **ನರಸಪ್ಪ :** ರಾಯಾಪುರದ ಜಮೀನ್ದಾರ. ವಯಸ್ಸು ಸುಮಾರು ೫೦. [ಕಚ್ಚೆಪಂಚೆ, ಬನಿಯನ್, ಮೀಸೆ, ಸಣ್ಣ ಜುಟ್ಟು ಗಂಟು, ಅಕ್ಷತೆ.]

೨. **ಭಾಗಮ್ಮ :** ನರಸಪ್ಪನ ಧರ್ಮಪತ್ನಿ. ದೊಡ್ಡ ಅಂಚಿನ ಸೀರೆ, ಅಡ್ಡ ಕುಂಕುಮ, ಹೂ.]

೩. **ನಾಣಿ :** ಭಾಗಮ್ಮನ ತಮ್ಮ. ವಯಸ್ಸು ಸುಮಾರು ೨೦. [ಸುತ್ತುಪಂಚೆ, ಕೋಟ್, ಕ್ರಾಪ್ ಮತ್ತು ಹೆಗಲ ಮೇಲೆ ಒಂದು ಚಿತ್ರವಸ್ತ್ರ.]

೪. **ಜಯು :** ನರಸಪ್ಪನ ಮಗಳು. ವಯಸ್ಸು ೧೩. [ಕನ್ಯೆಯಂತೆ ಅಲಂಕಾರ.]

೫. **ನಳಿನಿ :** ಭಾಗಮ್ಮನ ಅಕ್ಕನ ಮಗಳು. ವಯಸ್ಸು ೧೩. [ಕನ್ಯೆಯಂತೆ ಅಲಂಕಾರ.]

೬. **ರಮೇಶ್,** ಬಿ.ಎ. : ಜಯುವನ್ನು ವಿವಾಹವಾಗಲಿರುವ ಆಧುನಿಕ ಯುವಕ; ನಗರದ ಶ್ರೀಮಂತ ನೀಲಕಂಠರಾಯರ ಮಗ. [ಜರತಾರಿ ಕಚ್ಚೆ ಪಂಚೆ, ಕೋಟ್, ಕ್ರಾಪ್.]

೭. **ಚಂದು,** ಬಿ.ಎ : ರಮೇಶನ ಸ್ನೇಹಿತ. [ಜರತಾರಿ ಕಚ್ಚೆ ಪಂಚೆ, ಕೋಟ್, ಕ್ರಾಪ್.]

೮. **ಶ್ರೀಮಂತ ನೀಲಕಂಠರಾಯರು :** ರಮೇಶನ ತಂದೆ; ಜೋಡೀದಾರರು. [ಜರತಾರಿ ಕಚ್ಚೆಪಂಚೆ, ನಿಲುವಂಗಿ, ರುಮಾಲು, ಮೀಸೆ, ಬೆತ್ತ.]

**೯. ಪುರೋಹಿತರು:** ವಯಸ್ಸು ೪೫. [ಸೀಲಂ ಪಂಚೆಕಚ್ಚೆ, ಶಲ್ಯ, ಶಲ್ಯದಿನ ರುಮಾಲು, ವಿಭೂತಿ, ಗಂಧಾಕ್ಷತೆ, ಪುಸ್ತಕ.]

## ಸ್ಥಳ

ರಾಯಾಪುರದಲ್ಲಿ ನರಸಪ್ಪನ ಮನೆಯ ದಿವಾನ್‌ಖಾನೆ. ಅದರ ನಕ್ಷೆ ಹೀಗಿದೆ:




**ಅ:** ಹೊರಬಾಗಿಲು.

**ಆ:** ಒಳಬಾಗಿಲು. ಸೊಗಸಾದ ತೆರೆಯುಳ್ಳದ್ದು.

**ಇ:** ಕೋಣೆಯ ಬಾಗಿಲು. ಸೊಗಸಾದ ತೆರೆಯುಳ್ಳದ್ದು.

**ಕ, ಚ, ಟ:** ಕುರ್ಚಿಗಳು.

**ತ:** ಮೇಜು.

**ಪ:** ಉಡುಪಿನ ನಿಲುವು. ಅದರ ಮೇಲೆ ಒಂದು ಶಲ್ಯ ಇದೆ.

**ಯ, ರ, ಲ:** ಸ್ಥಳ ಸಂಕೇತಗಳು.

[ಎದುರು ಗೋಡೆಯ ಮಧ್ಯೆ ಒಂದು ಚಿತ್ರಪಠ ಹಾಕಿದೆ.]

ಈ ನಾಟಕದಲ್ಲಿ ಅಲ್ಲಲ್ಲಿ ಕೊಟ್ಟಿರುವ ಅಕ್ಷರ ಸಂಕೇತಗಳು ಈ ನಕ್ಷೆಗೆ ಅನ್ವಯಿಸುತ್ತವೆ.

## ಕಾಲ

ಸಾಯಂಕಾಲದಿಂದ ಕೆಲವು ಗಂಟೆಗಳ ಕಾಲ.

## ತೆರೆಯ ಹಿಂದೆ

ಸುಲೋಚನ, ಭಗವದ್ಗೀತೆಯ ಪುಸ್ತಕ, ಕಸೂತಿ ಸಾಮಗ್ರಿ, ನೂಲುದಾರ, ಪುರೋಹಿತರ ಪುಸ್ತಕ, ಎರಡು ಲೋಟ ಪಾನಕ, ಜಾತಕ, ತಟ್ಟೆಯಲ್ಲಿ ತಾಂಬೂಲ, ಶಲ್ಯ, ಹಣ್ಣಿನ ಬುಟ್ಟಿ, ಕೈಪೆಟ್ಟಿಗೆ, ಬೆತ್ತ, ಮೂರು ಲೋಟ ಕಾಫಿ, ಕೆಟ್ಲ್, ಚಕ್ಕುಲಿ ಮುಚ್ಚೋರೆ ಕೋಡಬಳೆ, ಕಿತ್ತಲೆ ಮತ್ತು ಇತರ ಹಣ್ಣು, ನಾಣಿಯ ಬಣ್ಣದ ಗುಳೂಪ (ರಬ್ಬರಿನದು), ಮೇಜಿಗೆ ಹಾಸುವ ಚೌಕ, ಹಾರ್ಮೋನಿಯಂ, ಒಂದು ಲೋಟ ನೀರು, ಛತ್ರಿ, ಒಂದು ಕಾಗದ— ಇವು ತೆರೆಯ ಹಿಂದೆ ಅಣಿಯಾಗಿರುವುವು.

---

## ಕಥಾ ಸಾರಾಂಶ

ನಾಣಿ ನಿರಕ್ಷರಕುಕ್ಷಿ. ಬಾಲ್ಯದಲ್ಲೇ ತಂದೆ ತಾಯಿ ತೀರಿ ಹೋಗಿ, ಅಕ್ಕ ಭಾಗಮ್ಮನ ಮನೆಯಲ್ಲಿ ಸ್ವೇಚ್ಛೆಯಾಗಿ ಬೆಳೆದ. ಇವನ ಭಾವ ನರಸಪ್ಪನಿಗೆ ಇವನನ್ನು ಕಂಡರೆ ಅಸಡ್ಡೆ; ಇದು ನಾಣಿಗೂ ಗೊತ್ತಿತ್ತು. ನರಸಪ್ಪನ ಮಗಳು ಜಯುವಿನ ವಿವಾಹ ನಿಶ್ಚಯ ಸಮಯದಲ್ಲಿ ನಾಣಿ ಕುಚೇಷ್ಟೆಮಾಡಿ ಭಾವನ ಮೇಲಿನ ಮುಯ್ಯಿ ತೀರಿಸಿಕೊಂಡ.

ನಳಿನಿ ಭಾಗಮ್ಮನ ಅಕ್ಕನ ಮಗಳು. ಅವಳೂ ಅನಾಥೆಯಾಗಿ ಭಾಗಮ್ಮನ ಮನೆಯಲ್ಲೇ ಬೆಳೆದಳು. ಅವಳು ನಾಣಿಯನ್ನು ಮದುವೆಯಾಗಲೊಲ್ಲಳು. ಅವಳ ಮನಸ್ಸು ಬೇರೆಕಡೆ ಇತ್ತು.

ಕೊನೆಗೆ ಜಯು ಮತ್ತು ನಳಿನಿ ಇಬ್ಬರ ಮದುವೆಗಳೂ ಏಕ ಕಾಲದಲ್ಲಿ ನಿಶ್ಚಯವಾದವು.

# ನಿಶ್ಚಿತಾರ್ಥ

ಅಥವಾ

# ಭರಚುಕ್ಕಿ

---

## [ ನರಸಪ್ಪ ಮತ್ತು ಭಾಗಮ್ಮ ]

[ನರಸಪ್ಪನು ಬನಿಯನ್, ಕಚ್ಚೆಪಂಚೆ, ಸುಲೋಚನಗಳನ್ನು ಧರಿಸಿ, ಪಿಳ್ಳೆಜುಟ್ಟನ್ನು ಮೇಲಕ್ಕೆ ಗಂಟು ಹಾಕಿಕೊಂಡು, ಭಗವದ್ಗೀತೆ ಪುಸ್ತಕವನ್ನು ನೋಡುತ್ತ, (ಕ) ಕುರ್ಚಿಯಲ್ಲಿ ಕುಳಿತಿರುವನು. ಭಾಗಮ್ಮನು ಚೌಕಕ್ಕೆ ಕಸೂತಿ ಹಾಕುತ್ತ, ಮತ್ತು ಏನನ್ನೋ ಯೋಚಿಸುತ್ತ, (ಚ) ಕುರ್ಚಿಯಲ್ಲಿ ಕುಳಿತಿರುವಳು.]

**[ತೆರೆ ಏಳುವುದು]**

**ನರಸಪ್ಪ**

[ಸುಲೋಚನವನ್ನು ಮೂಗಿನ ತುದಿಯಲ್ಲಿರಿಸಿ, ಹುಬ್ಬು ಮೇಲಕ್ಕೆತ್ತಿ, ತಲೆ ಅಲ್ಲಾಡಿಸುತ್ತ ಗಟ್ಟಿಯಾಗಿ ಓದುವನು.]

**ಕರ್ಮಣ್ಯೇವಾಧಿಕಾರಸ್ತೇ**
**ಮಾ ಫಲೇಷು ಕದಾಚನ ।**

ಆಹಾ! ಎಷ್ಟು ಸ್ವಾರಸ್ಯವಾಗಿ ಹೇಳಿದ್ದಾನೆ ಪರಮಾತ್ಮ !!............
[ಸುಲೋಚನದ ಮೇಲ್ಭಾಗದ ಸಂದಿಯಿಂದ ಭಾಗಮ್ಮನನ್ನು ನೋಡಿ]........
ಏನೋ ಯೋಚನೇ ಮಾಡ್ತಾ ಇರೋಹಾಗಿದೇ?

**ಭಾಗಮ್ಮ**

[ತನ್ನ ಕೆಲಸದಲ್ಲಿ ನಿರತಳಾಗಿ, ಗಂಭೀರವಾಗಿ] ಏನೂ ಇಲ್ಲ.

ನರಸಪ್ಪ

ಏನೂ ಇಲ್ಲದೇನೇ ಮುಖದಲ್ಲಿ ಆ ಗಾಂಭೀರ್ಯದ ಮುದ್ರೆ ಮೂಡೀತೇ? ಅದೇನು ಹೇಳು ಕೇಳೋಣ. ಒಬ್ಬರೇ ಯೋಚಿಸೋದಕ್ಕಿಂತ ಇಬ್ಬರಾದರೆ ಮೇಲು........ಹೌದೋ ಅಲ್ವೋ?.... ಇನ್ನೇನು, ನಿನ್ನ ಮನಸ್ಸಿನಲ್ಲಿರೋದು, ಜಯೂ ಮದುವೆ ಯೋಚನೆ ತಾನೇ?

ಭಾಗಮ್ಮ

ಯೋಚನೇ ಮಾಡಬೇಕೋ ಬೇಡವೋ ಹೇಳಿ— ಬೆಳೆದ ಕನ್ಯೆ ಮನೇಲಿರೋವಾಗ?........ವರಾನ್ವೇಷಣದ ಗೋಜನ್ನೇ ಬಿಟ್ಟು ನಿರ್ಯೋಚನೆಯಾಗಿ ಕುಳಿತು ಭಗವದ್ಗೀತೆ ಓದಿದರೆ ಕೆಲಸಗಳು ಹೇಗಾಗಬೇಕೂ?

ನರಸಪ್ಪ

ನನಗೇನು ಯೋಚನೆ ಇಲ್ವೇ? ನಾನೇನು ಸುಮ್ಮನೇ ಇದ್ದೇನೆಯೇ? ನೀಲಕಂಠರಾಯರಿಗೆ ಆ ದಿನವೇ ಕಾಗದ ಬರೆದೆನಲ್ಲ. ಹಳೇ ಸ್ನೇಹಿತರು. ಮಗನಿಗೆ ಈಗ ತಾನೇ ಬಿ. ಎ. ಪ್ಯಾಸಾಗಿದೆ. ವಿವಾಹ ಆಗಬೇಕು. ಉತ್ತರ ಏನು ಬರೀತಾರೋ ನೋಡೋಣ.

ಭಾಗಮ್ಮ

ನೀವು ಕಾಗದ ಬರೆದು ಒಂದು ತಿಂಗಳಾಯ್ತು. ಇನ್ನೂ ಅವರಿಂದ ಉತ್ತರ ಬರಲಿಲ್ಲ.

ನರಸಪ್ಪ

ಅದಕ್ಕೆ ನಾನೇನು ಮಾಡಲಿ? ಈಗ ತಾನೇ ಓದಲಿಲ್ಲವೇ ಭಗವದ್ವಾಕ್ಯ: “ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ”

— ಅಂದರೇ, "ಕಾಗದ ಬರೆಯೋದು ನಿನ್ನ ಕೆಲಸವೇ ವಿನಾ, ಉತ್ತರ ಬರೋಪಕ್ಕೆ ನೀನು ಹೊಣೆಯಲ್ಲ" ಅಂತ. ಅಲ್ಲದೆ ಋಣಾನುಬಂಧಗಳು ಹ್ಯಾಗೆ ಹ್ಯಾಗೆ ಇರುತ್ತವೆಯೋ ಯಾರು ಕಂಡಿದಾರೆ? ಎಲ್ಲ ನಾವೇ ಮಾಡ್ತೇವೆ ಅಂತ ತಿಳಿಯೋದು ಬರೀ ಮೌಢ್ಯ. ಕೊನೆಗಾಗೋದು ಪ್ರೈವೇಚ್ಛೆಯಂತೆ!

## ಭಾಗಮ್ಮ

ಹಾಗಂತ ಸುಮ್ಮನೇ ಕೂತರೆ ಹೇಗೆ?

## ನರಸಪ್ಪ

ಹೋಗಲಿ, ಈಗ ನಿನ್ನ ಯೋಚನೆ ಏನು ಹೇಳು, ಕೇಳೋಣ.

## ಭಾಗಮ್ಮ

ನೀಲಕಂಠರಾಯರನ್ನೊಬ್ಬರನ್ನೇ ನಂಬಿಕೊಂಡು ಕೂತುಕೊಳ್ಳೋ ದಕ್ಕಿಂತಾ — ಹೋಗಲಿ ಬಿಡಿ, ನನ್ನ ಯೋಚನೆ ನಿಮಗೆ ಸರಿ ಹೋಗುತ್ತೋ ಇಲ್ವೋ........

## ನರಸಪ್ಪ

ಅದೇನು ಹೇಳಿಬಿಡು ನೋಡೋಣ. 'ನೀಲಕಂಠರಾಯರನ್ನೊ ಬ್ಬರನ್ನೇ ನಂಬಿಕೊಂಡು ಕೂತುಕೊಳ್ಳೋದಕ್ಕಿಂತ'........?

## ಭಾಗಮ್ಮ

ಬೆಂಗಳೂರಿಗೆ ಹೋಗೋಣ...........[ನರಸಪ್ಪ ಹುಬ್ಬು ಮೇಲಕ್ಕೆತ್ತಿ ಮೂತಿ ಉದ್ದಕ್ಕೆ ಮಾಡುವನು] ಆ ಊರಿನ ತುಂಬ ಒಳ್ಳೇವರ ಇದ್ದಾ ರಂತೆ. ವಿಚಾರಿಸೋಣ.

ನರಸಪ್ಪ

ನೋಡು, ದೊಡ್ಡ ಪಟ್ಟಣಗಳೂ ಅಂದರೆ ನನಗೆ ಆಗೋದಿಲ್ಲ. ಬೆಂಗಳೂರಲ್ಲಿ ನಮ್ಮನ್ನ ಮಾತನಾಡಿಸೋರು ಯಾರು?

ಭಾಗಮ್ಮ

ನೀವೇ ಮಾತನಾಡಿಸಿದರಾಯ್ತು.

ನರಸಪ್ಪ

ಯಾರನ್ನ ಮಾತನಾಡಿಸಬೇಕು?

ಭಾಗಮ್ಮ

ಕಾಲೇಜಿಗೆ ಹೋಗಿ ಹೆಡ್ಮಾಸ್ಟರನ್ನು ಕೇಳಿದರೆ ಸರಿಯಾದವರನ್ನ ಗೊತ್ತುಮಾಡಿಕೊಡ್ತಾರೆ.

ನರಸಪ್ಪ

[ನಗು] ನನಗೆ ನಗು ಬರುತ್ತೆ. ಕಾಲೇಜು ಪ್ರಿನ್ಸಿಪಾಲರಿಗೆ ಬೇರೇ ಕೆಲಸ ಇಲ್ಲವೇ?

ಭಾಗಮ್ಮ

ಇನ್ನು ಯಾರನ್ನಾದರೂ ಕೇಳೋದು, ನಾಲಕ್ಕು ಕಡೆ ಪ್ರಯತ್ನ ಮಾಡಿ ನೋಡೋದು.

ನರಸಪ್ಪ

ನಾ ಹೇಳ್ತೀನಿ ಕೇಳೂ — ಅದೊಂದೂ ಸರಿ ಹೋಗೋದಿಲ್ಲ.

ಭಾಗಮ್ಮ

ನನಗೆ ಮೊದಲೇ ಗೊತ್ತು — ನಿಮಗೆ ಈ ಯೋಚನೆ ಸರಿ ಹೋಗೋದಿಲ್ಲಾಂತ. ಈ ವೂರು ಬಿಟ್ಟು ಕದಲಲೇ ಕೂಡದೂ

ಅಂತ ಸಂಕಲ್ಪಮಾಡಿದ್ದೀರಿ. ನನಗೋ ಈ ಹಳ್ಳೀಲಿ—ಹಳ್ಳೀನೂ ಅಲ್ಲ, ಹಳ್ಳೀಗೆ ಅರ್ಧ ಮೈಲಿ ದೂರದಲ್ಲಿರೋ ಈ ಹಳೇ ಮನೇಲಿ — ಇದ್ದೂ ಇದ್ದೂ ಬೇಸರವಾಗಿಬಿಟ್ಟಿದೆ. ಇಲ್ಲಿ ಜನಸಂಚಾರವೇ ಇಲ್ಲ. ನಮ್ಮ ಮನೆಗೆ ಬರೋವ್ರಂದ್ರೆ, ಆ ಶ್ಯಾನುಭೋಗರ ತಾಯಿ ನಾಗಜ್ಜಿ, ಆ ಪಟೇಲ್ ತಾತಯ್ಯ ಇಬ್ಬರೇ. ವಿನೋದ ಬೇಕು ಅಂದರೆ, ಆ ಪಟೇಲ್ ತಾತಯ್ಯನ ಅಪಸ್ಮೃತಿ, ಅಥವಾ ನಿಮ್ಮ ಹಳೇ ಕಥೆಗಳು: ಹಿಂದೆ ಅಮಲ್ದಾರ್ ಗುಂಡಪ್ಪನೋರ ದವಲತ್ತು ಹಾಗಿತ್ತು, ಜೋಡಿದಾರ್ ನೀಲಕಂಠರಾಯರ ದಂಡೆ ಹೀಗಿದ್ರು — ಹೇಳಿದ್ದನ್ನೇ ಹೇಳ್ತೀರಿ.

### ನರಸಪ್ಪ

ಹಳೇ ಕಥೆಗಳು ಅಂದರೆ ಬಹಳ ವಿಶ್ವಾಸ ನನಗೆ! ಹಳೇ ಸ್ನೇಹಿತರು, ಹಳೇ ಕಾಲ, ಹಳೇ ಪದ್ಧತಿ,....ಅಂ?....ಹಳೇ ಹೆಂಡತಿ....

### ಭಾಗಮ್ಮ

[ಕಿರುನಗೆಯಿಂದ] ಸುಮ್ಮನಿರಿ ಸಧ್ಯ....ನನಗೇನಷ್ಟು ವಯಸ್ಸಾಗಿಲ್ಲ. ನಾಣೀನೇ ಇದಾನಲ್ಲ ನನ್ನ ತಮ್ಮ — ಅವನು ನನಗಿಂತ ಸ್ವಲ್ಪ ಚಿಕ್ಕೋನು ಅಷ್ಟೆ. ಅವನಿಗಿನ್ನೂ ಬುದ್ಧಿ ಬರೋ ವಯಸ್ಸಾಗಿಲ್ಲ.

### ನರಸಪ್ಪ

ಅವನಿಗೆ ಬುದ್ಧಿ ಬರೋದೂ ಇಲ್ಲ. ಆ ಚಪಲ ಇಟ್ಟುಕೊಳ್ಳೊ ಬೇಡ..........ನಾನು ಹೀಗಂದೆ ಅಂತ ಸಿಟ್ಟುಮಾಡಿಕೋಬೇಡ. ತಮ್ಮ ಅನ್ನೋ ವಾತ್ಸಲ್ಯ ನಿನಗಿರೋದು ನ್ಯಾಯವೇ ಅನ್ನು. ನಾನೂ ಕೂಡ ಏನೋ ತಂದೆ ತಾಯಿ ಇಲ್ಲದ ಹುಡುಗ ಅಂತ

ಸಾಕಿದೆ. ಆದರೆ ನೀನು ಮುದ್ದು ಮಾಡೀ ಮಾಡೀ ಶುದ್ಧ ಅಶಿಕ್ಷೈ ಆಗಿ ಬಿಟ್ಟ. ಓದಿಲ್ಲ, ಬರಹವಿಲ್ಲ. ಹೀಗಾದರೆ ಮುಂದೆ ಅವನಗತಿ ಏನೊ?

### ಭಾಗಮ್ಮ

[ಅಸಮಾಧಾನದಿಂದ] ಚಿಂತೆಯಿಲ್ಲ. ಅವನಿಗೇನು, ಪಿತ್ರಾರ್ಜಿತವಾದ ಆಸ್ತಿ ಬೇಕಾದಷ್ಟಿದೆ. ತಿಂಗಳಿಗೈವತ್ತು ರೂಪಾಯಿ ವರಮಾನಕ್ಕೇನೂ ಮೋಸವಿಲ್ಲ. ಇನ್ನು ಅವನ ಮದುವೇ ವಿಚಾರವಾಗಿ ಯಾರೂ ಏನೂ ಶ್ರಮ ತಕ್ಕೋಬೇಕಾಗ್ದಿಲ್ಲ. ನಮ್ಮನೇಲೇ ಇದಾಳೆ ಕನ್ಯೆ — ನಳಿನಕ್ಕ, ನಮ್ಮಕ್ಕನ ಮಗಳು, ಸೋದರಿಕೆ. ನಮ್ಮಕ್ಕ ಸಾಯೋವಾಗ ವಡವೆಯೆಲ್ಲ ನನ್ನ ಕೈಗೇ ಕೊಟ್ಟು ಹೇಳಿ ಹೋಗಿದಾಳೆ — ಮಗಳು ದೊಡ್ಡೋಳಾದ್ಮೇಲೆ ವಡವೆಯಿಟ್ಟು ನಾಣೀಗೆ ಕೊಟ್ಟು ಮದುವೆ ಮಾಡಬೇಕು ಅಂತ.......ಅಲ್ಲಾ, ನಳಿನೀನ ಮದುವೇ ಮಾಡಿಕೊಂಡು, ತಿಂಗಳಿಗೈವತ್ತು ರೂಪಾಯಿ ವರಮಾನ ಖರ್ಚುಮಾಡೋದಕ್ಕೆ ಪಾಂಡಿತ್ಯ ಎಷ್ಟುಬೇಕು?

### ನರಸಪ್ಪ

ಪಾಂಡಿತ್ಯ! ಆ ಪಟಿಂಗನಿಗೆ ಪಾಂಡಿತ್ಯ?

### ಭಾಗಮ್ಮ

ಪಟಿಂಗತನ ಅಲ್ಲಾಂದ್ರೆ, ವಿನೋದ; ತಮಾಷೆ. ಹುಡುಗರು ತಮಾಷೆ ಮಾಡದೇ ಇರ್ತಾರ್ಯೇ?

## [ಪ್ರವೇಶ (ಆ) : ನಾಣಿ.]

[ನಾಣಿಯು ಪ್ರವೇಶಿಸಿ (ಆ) ಬಾಗಿಲಬಳಿ ನಿಂತು ಆಲಿಸುವನು. ಅವನ ಜೇಬಿನಲ್ಲಿ ಉದ್ದವಾದ ಒಂದು ನೂಲುದಾರ ಇರುವುದು. ಅವನ ಆಗಮನವು ನರಸಪ್ಪನಿಗೇ ಆಗಲಿ ಭಾಗಮ್ಮನಿಗೇ ಆಗಲಿ ತಿಳಿಯದು.]

### ನರಸಪ್ಪ

[ಎದ್ದು, (ಯ) ಎಂಬಲ್ಲಿಗೆ ಬಂದು] ಕೇಳ್ರೊ, ಸೈಕಲ್ ವಾಲ್ವ್‌ಟ್ಯೂಬ್ ಕಿತ್ತಾಕೋದು, ಬೆಕ್ಕಿನ ಕುನ್ನಿಗಳನ್ನ ಹೆದರಿಸೋದು, ಕುದುರೇ ಮರಿ ಬಾಲಕ್ಕೆ ಡಬ್ಬ ಕಟ್ಟಿ ಓಡಿಸೋದು — ಇಂಥಾದ್ದೆಲ್ಲಾ ತಮಾಷೆ ಆದರೆ, ಈ ತಮಾಷೆ ಜೇಕಾದಷ್ಟಿದೆ ಅವನಲ್ಲಿ! ನಿನ್ನ ತಮ್ಮನ ತಮಾಷೆ ನಿನಗೇ ಪ್ರೀತಿ. [ಮತ್ತೆ (ಕ) ಕುರ್ಚಿಯಲ್ಲಿ ಕುಳಿತು ಪುಸ್ತಕ ತೆರೆಯುವನು.]

### ಭಾಗಮ್ಮ

ಹೋಗಲಿ ಬಿಡಿ, ಆ ಸುದ್ದಿಯಾಕೆ?

[ನರಸಪ್ಪ ಪುಸ್ತಕವನ್ನು ಮನಸ್ಸಿನಲ್ಲೇ ಓದುವವನಂತೆ ನಟಿಸುತ್ತ ಕುಳಿತಿರುವನು. ಭಾಗಮ್ಮ ಕಸೂತಿಯಲ್ಲಿ ನಿರತಳಾಗಿರುವಳು. ಇಬ್ಬರೂ ಮೌನವಾಗಿರುವರು. ಆಗ ನಾಣಿ ಮೆಲ್ಲನೆ ನರಸಪ್ಪನ ಹಿಂದಕ್ಕೆ ಬಂದು, ಆತನ ಜುಟ್ಟಿಗೂ ಕುರ್ಚಿಗೂ ದಾರಕಟ್ಟಿ, ಹಲ್ಲು ಕಿರಿದು, ಒಳಕ್ಕೆ ಹೋಗುವನು.]

**[ನಿರ್ಗಮ (ಅ) : ನಾಣಿ.]**

### ನರಸಪ್ಪ

ಅಲ್ಲಾ........ನಿನ್ನೆ ಮಧ್ಯಾಹ್ನ ನಾನೂ ಪಿಟೀಲ್ ತಾತಯ್ಯ ಇಬ್ರೂ ಕೂತುಕೊಂಡು ಮಾತ್ನಾಡ್ತಾ ಇದೇವೇ; ಯಾವಾಗಲೋ ಹಿಂದಿನಿಂದ ಬಂದು ನನ್ನ ಜುಟ್ಟಿಗೂ ಕುರ್ಚಿಗೂ ದಾರ ಕಟ್ಟಿ ಹೋಗಿದಾನೆ ಈ ನಾಣಿ! ತಾತಯ್ಯನೋರು ಹೋಗೋವಾಗ ನಮಸ್ಕಾರ ಮಾಡೋಣಾಂತ ಏಳ್ತೀನಿ........ಆಂ? ಏನಿದೆಲ್ಲಾ ತಮಾಷೇನೇ? [ಎಂದು ಏಳುವನು. ದಾರ ಹಿಂದಕ್ಕೆ ಎಳೆಯುವುದು. ಹಿಂದಕ್ಕೆ ನೋಡಿ ಕೋಪದಿಂದ ತನ್ನಲ್ಲಿ] ಎಲಾ, ಇವನ ಮನೆ ಹಾಳಾಗಾ! [ಹೆಂಡತಿಗೆ] ನೋಡಿದ್ಯಾ, ಮತ್ತೆ ಅದೇ ಕೆಲಸ ಮಾಡಿರೋದು?

ಭಾಗಮ್ಮ

ಈ ಹುಡುಗ ಯಾಕ್ಹೀಗ್ಮಾಡ್ತಾನೋ ಏನೋ [ಎನ್ನುತ್ತ ಎದ್ದು ಬಂದು ದಾರ ಬಿಚ್ಚಿ ಮತ್ತೆ ಯಥಾಸ್ಥಾನದಲ್ಲಿ ಕುಳಿತು ಕಸೂತಿ ಹಾಕುತ್ತಿರುವಳು.]

ನರಸಪ್ಪ

[ (ಯ) ಎಂಬಲ್ಲಿ ನಿಂತು ]ಇವನ್ನ ಹೀಗೆ ಬಿಟ್ಟರೆ ಆಗೋದಿಲ್ಲ.

ಭಾಗಮ್ಮ

ಅವನಿಗೆ........ಶರೀರ ದಾರ್ಢ್ಯ ಇಲ್ಲ; ಪಾಪ, ಕೆಮ್ತಾನೆ.

ನರಸಪ್ಪ

[ತನ್ನಲ್ಲಿ] ಸಿಗರೇಟಿನ ಹೊಗೆ ಗಂಟ್ಲಲ್ಲಿ ದಾರೀ ತಪ್ಪಿದರೆ, ಆಗ ಕೆಮ್ಮಲೇಬೇಕು.

ಭಾಗಮ್ಮ

ಇನ್ನೂ ಚಿಕ್ಕವಯಸ್ಸು. ಇನ್ನೊಂದೆರಡೊರ್ಷ ಆದ್ಮೇಲೆ ಅಥ್ವಾ ಒಂದಾರು ತಿಂಗ್ಳು ಕಾಲೇಜಿಗೆ ಕಳಿಸಿ,........

ನರಸಪ್ಪ

ಅಲ್ಲ, ಇಪ್ಪತ್ತುವರ್ಷ ಆಗ್ತಾ ಬಂತು ಅವನಿಗೆ. ವರ್ಣಮಾಲೆ ಪೂರ್ತಿ ಬರೋದಿಲ್ಲ........ಕಾಲೇಜು ! ಆ ವಜ್ರಶುಂಠನಿಗೆ ಕಾಲೇಜು !! ನಿಂಗೆಲ್ಲೋ ಭ್ರಾಂತಿ. ಆ ಥಗ್ಗಿನಲ್ಲಿರೋ ತೋಪೇ ಅವನ ಕಾಲೇಜು. ಅಲ್ಲಿ ಅವನ ಸಹಪಾಠಿಗಳೋ, ಏನ್ಹೇಳ್ಲಿ !

**[ಪ್ರವೇಶ (ಅ) : ನಾಣಿ.]**

[ನಾಣಿ ಕೆಮ್ಮುತ್ತ ಒಳಬಾಗಿಲಿನಿಂದ ಪ್ರವೇಶಿಸಿ, ಅವಸರವಾಗಿ (ಅ) ಬಾಗಿಲ ಕಡೆಗೆ ಹೋಗುತ್ತಿರುವನು.]

ಭಾಗಮ್ಮ

ಮಗೂ, ನಾಣೀ........

ನರಸಪ್ಪ

[ತನ್ನಲ್ಲಿ] ಹೌದು, ಎಳೀಮಗು ! ಕಂದಮ್ಮ !!

ನಾಣಿ

[ (ಲ) ಎಂಬಲ್ಲಿ ನಿಂತು ] ಏನಕ್ಕ ? ಬೇಗ ಹೇಳು, ನಾ ಹೋಗಬೇಕು.

ಭಾಗಮ್ಮ

ಎಲ್ಲೀಗೆ? ಅಷ್ಟವಸರವಾಗಿ ಹೊರಟಿದ್ದೀ? ನಿಮ್ಮ ಭಾವನೋರ ಜೊತೇಲಿರಬಾರದೆ ?

ನಾಣಿ

ಸಾಧ್ಯವಿಲ್ಲ.

ಭಾಗಮ್ಮ

ಹೊರಗೆ ಮೋಡ ಕವಿದಿದೆ. ಸಾಯಂಕಾಲದ ಹೊತ್ತು. ನಿನ್ನ ಆರೋಗ್ಯ ನೆಟ್ಟಗಿಲ್ಲ. ನೆಗಡಿಯಾದೀತು.

ನಾಣಿ

ಅಕ್ಕ, ನಾನು ಆಡಿದ ಮಾತಿಗೆ ತಪ್ಪೋವನಲ್ಲ ಅನ್ನೋ ವಿಷ್ಯ ನಿನಗೆ ಗೊತ್ತೇ ಇದೆ. 'ನಿಲ್ಲೋದು ಸಾಧ್ಯವಿಲ್ಲ' ಅಂದುಬಿಟ್ಟೆದೀನಿ. ಮುಗೀತು. ನನ್ನ ಸ್ನೇಹಿತರೆಲ್ಲ ನಿರೀಕ್ಷಿಸ್ತಾ ಇರ್ತಾರೆ ತೋಪಿನಲ್ಲಿ. ಅಲ್ಲಿ ಎಷ್ಟೋ ಕೆಲಸ ಇದೆ. ನಾಳೆ ಇಲ್ಲ ನಾಳಿದ್ದು ನಾಟಕ ಆಡಿಸಬೇಕು ಜಾತ್ರೇಲಿ. ವೇಷದೋರನ್ನೆಲ್ಲ ಕಲೇ ಹಾಕಬೇಕು ಪ್ರಾಕ್ಟೀಸಿಗೆ.

ನರಸಪ್ಪ

[ತನ್ನಲ್ಲಿ] ಅದೇ ಇವನ ಕಾಲೇಜು, ನನಗ್ಗೊತ್ತು !

ಭಾಗಮ್ಮ

ಒಂದ್ಸಾಯಂಕಾಲ ನಿನ್ನ ಸ್ನೇಹಿತರಿಗೆಲ್ಲ ನಿನ್ನ ಜೊತೆ ತಪ್ಪಿದರೆ ತಾನೆ ಏನು ?

ನಾಣಿ

ಅವರಿಗೆ ನನ್ನ ಜೊತೆ ತಪ್ಪೋ ವಿಷಯವಾಗಿ ನಾನು ವ್ಯಸನ ಪಡೋದಿಲ್ಲ. ಆದರೆ ನನಗೆ ಅವರ ಜೊತೆ ತಪ್ಪುತ್ತಲ್ಲಾಂತ ಯೋಚನೆ. ಅಷ್ಟೆ..... [(ಅ) ಕಡೆ ನೋಡಿ, ತನ್ನಲ್ಲಿ] ಯಾರೋ ಒಂಟಿ ಬ್ರಾಹ್ಮಣ ಬರ್ತಾ ಇದಾನಲ್ಲ ಎದುರಿಗೆ. ಶಕುನ ಸರಿಹೋಗ್ಲಿಲ್ಲ. ಹೀಗೇ ಹಿತ್ಲ ಬಾಗ್ಲಿಂದ್ಲೇ ಹೋದರಾಯ್ತು .....
[ಎನ್ನುತ್ತ ವಾಪಸು ಹೋಗುವನು.]

[ನಿರ್ಗಮ (ಅ) : ನಾಣಿ.]

ಭಾಗಮ್ಮ

ನಾಣೀ, ನಾಣೀ, ಖಂಡಿತ ಹೋಗಬೇಡ........ [ಎನ್ನುತ್ತ ಹಿಂಬಾಲಿಸುವಳು.]

[ನಿರ್ಗಮ (ಅ) : ಭಾಗಮ್ಮ.]

ನರಸಪ್ಪ

[ಅವರು ಹೋದ ಕಡೆ ನೋಡುತ್ತ] ಇವನ ಅವಿವೇಕಗಳನ್ನು ನೋಡೋ ಮುಂಚೆ ಕಣ್ಣು ಮುಚ್ಚಿಕೊಂಡ ಇವನ ತಂದೆಯೇ ಭಾಗ್ಯಶಾಲಿ !... ಇವಳಿಗೆ ತಮ್ಮ ಅನ್ನೋ ವಾತ್ಸಲ್ಯ. ಅವನು ಏನು ಮಾಡಿದರೂ ವಹಿಸಿಕೊಂಡು ಬರ್ತಾಳೆ !

*

## [ಪ್ರವೇಶ (ಅ) : ಪುರೋಹಿತರು.]

[ಪುರೋಹಿತರು ಪುಸ್ತಕಹಸ್ತರಾಗಿ ಹೊರಬಾಗಿಲಿನಿಂದ ಪ್ರವೇಶಿಸುವರು.]

### ಪುರೋಹಿತರು

ನರಸಪ್ನೋರೇ,...........

### ನರಸಪ್ಪ

ಓಹೋ, ನಮಸ್ಕಾರ, ದಯಮಾಡ್ಸಿ ಶಾಸ್ತ್ರಿಗ್ಳೇ........ [ (ಚ) ಕುರ್ಚಿಯನ್ನು ಸರಿಯಾಗಿ ಹಾಕುತ್ತ, ಒಳಕ್ಕೆ ಕೂಗಿ] ನಳಿನಕ್ಕಾ, ಪುರೋಹಿತರು ಬಂದಿದಾರೆ........ [ಪುರೋಹಿತರಿಗೆ] ಕೂಡೋಣಾಗ್ಲಿ. [ಎಂದು (ಚ) ಕುರ್ಚಿ ತೋರಿಸಿ, (ಕ) ಕುರ್ಚಿಯ ಮುಂದೆ ಬಂದು ನಿಲ್ಲುವನು.]

### ಪುರೋಹಿತರು

[ (ಚ) ಕುರ್ಚಿ ಮುಂದೆ ನಿಂತು ]ತಾವು ಮೊದಲು ಕೂಡಿ, ನರಸಪ್ನೋರೇ.

### ನರಸಪ್ಪ

ಎಲ್ಲಾದ್ರೂ ಉಂಟೇ? ತಾವು ಮೊದಲು, ನಾವು ಆಮೇಲೆ.

### ಪುರೋಹಿತರು

[ದೃಢವಾಗಿ] ಹಾಗುಂಟೇ ನರಸಪ್ನೋರೇ, ನೀವೇನಾದ್ರೂ ಹೇಳಿ ನೀವು ಕೂತುಕೊಳ್ಳೋತನಕ ನಾನು ಕೂತುಕೊಳ್ಳೋದಿಲ್ಲ.

### ನರಸಪ್ಪ

[ಗಟ್ಟಿಯಾಗಿ] ಏನು ಸ್ವಾಮೀ ಹೀಗ್ಹೇಳ್ತೀರೀ? ವೇದಮೂರ್ತಿಗಳಿಗಿಂತ ಮೊದಲು ನಾನು ಕೂತುಕೊಳ್ಳೋಕಾಗುತ್ಯೇ?

### ಪುರೋಹಿತರು

ಹಾಗಾದ್ರೆ ಈಗ ಹ್ಯಾಗ್ಮಾಡಬೇಕು? ...........ಇಬ್ರೂ ಒಟ್ಟಿಗೇ ಕೂತ್ಕೊಳ್ಳೋಣ.

### ನರಸಪ್ಪ

ಏನೋ........ಅದು ಕೂಡ ನನಗೆ ಸಮಾಧಾನವಿಲ್ಲ........ ಊಂ, ಹಾಗೇ ಆಗ್ಲಿ.

[ಇಬ್ಬರೂ ಪರಸ್ಪರ ಎಚ್ಚರಿಕೆಯಿಂದ ನೋಡುತ್ತ ಏಕಕಾಲದಲ್ಲಿ ಕೂಡುವರು; ಮಧ್ಯೆ ಪುರೋಹಿತರು ಶಹಲನ್ನು ಸರಿಪಡಿಸಿಕೊಳ್ಳಲು ಎದ್ದಾಗ, ನರಸಪ್ಪನೂ ಎದ್ದು, ಆಮೇಲೆ ಇಬ್ಬರೂ ಒಟ್ಟಿಗೆ ಕೂಡುವರು.]

### ನರಸಪ್ಪ

ಎಲ್ಲಿಂದಾ, ಏನು ಕಥೇ? ........ ಈಚೆಗಂತು ತಮ್ಮನ್ನ ಊರಲ್ಲಿ ಕಾಣೋದೇ ಅಪೂರ್ವವಾಗಿ ಬಿಟ್ಟಿದೆ.

### ಪುರೋಹಿತರು

ನಾನು ಊರಲ್ಲಿದ್ರೇ ತಾನೇ ಸ್ವಾಮೀ ಕಾಣೋದೂ? ಕೆಲಸಗಳ ಮೇಲೆ ಕೆಲಸಗಳು, ಕಾರ್ಯಗಳ ಮೇಲೆ ಕಾರ್ಯಗಳು, ಆಹ್ವಾನಗಳ ಮೇಲೆ ಆಹ್ವಾನಗಳು! ಯಾವುದನ್ನು ನೋಡಿಕೊಳ್ಳೋದು, ಯಾವುದನ್ನು ಬಿಡೋದು?........ಮೊನ್ನೇ ನೋಡಿ, ಡಿಸ್ಟ್ರಿಕ್ಟಿನಿಂದ ಡೆಪ್ಯುಟಿ ಕಮೀಷನರ ಮನೆಗೆ ಯಾಕೋ ಹೇಳಿಕಳಿಸಿದ್ರು. ಹೋಗೋದಕ್ಕಾಗ್ಲೇ ಇಲ್ಲ. ಟೈಮಿದ್ರೇ ತಾನೇ? ಬರೋಕಾಗೋಲ್ಲಾಂತ ತಿಳಿಸಿಬಿಟ್ಟೆ........ನೋಡಿ ನರಸಪ್ನೋರೇ, ಗ್ರಂಥಗಳನ್ನೆಲ್ಲ ಅರ್ಥವತ್ತಾಗಿ ವ್ಯವಸಾಯಮಾಡಿ, ಅನುಭವಕ್ಕೆ ತಂದುಕೊಂಡು,

ಕಾರ್ಯಗಳನ್ನು ಸಾಂಗವಾಗಿ ತೂಗಿಸೋವ್ರು ನನ್ನ ಜೊತೆಗೆ ಇನ್ನೊಬ್ಬರು ಇದ್ದಿದ್ರೆ, ನನ್ನ ಕೈ ಸ್ವಲ್ಪ ಬಿಡುವಾಗ್ತಾ ಇತ್ತು. ಆದರೆ ನನ್ನ ಬಿಟ್ರೆ ಯಾರೂ ಇಲ್ಲ ನೋಡಿ.

### ನರಸಪ್ಪ

ಇದ್ದದ್ದರಲ್ಲಿ ಆ ಶ್ಯಾಂಭಟ್ಟರೊಬ್ಬರು ಮೇಲು.

### ಪುರೋಹಿತರು

ಕೆಲವು ಮಂತ್ರಗಳನ್ನು ಕಲಿತಿರಬಹುದು; ಆದರೆ ಅರ್ಥವತ್ತಾಗಿ ಏನೂ ಬರೋದಿಲ್ಲ.

**[ಪ್ರವೇಶ (ಅ) : ನಳಿನಿ.]**

[ನಳಿನಿ ಎರಡು ಲೋಟ ಪಾನಕವನ್ನು ತಂದು ಮೇಜಿನ ಮೇಲಿಟ್ಟು ಮತ್ತೆ ಒಳಕ್ಕೆ ಹೋಗುವಳು.]

**[ನಿರ್ಗಮ (ಅ) : ನಳಿನಿ.]**

### ನರಸಪ್ಪ

ಪಾನಕ ತಕೊಳ್ಳೋಣಾಗ್ಲಿ.

### ಪುರೋಹಿತರು

ತುಂಬಾ ಶ್ರಮ ತಕೊಂಡಿರಲ್ಲಾ ........ [ಎಂದು ಪಾನಕ ಸವಿಯುತ್ತ] ಈ ಮಗಳು ಯಾರೂ?

### ನರಸಪ್ಪ

[ಪಾನಕ ಸವಿಯುತ್ತ] ನಮ್ಮ ............ ಇವಳ........ ಅಕ್ಕನ ಮಗಳು, ನಳಿನಿ. ಈಚೆಗೆ ತಾಯಿತಂದೆ ಹೋಗಿ, ನಮ್ಮನೇಲೇ ಇದಾಳೆ.

ಪುರೋಹಿತರು

ನಿಮ್ಮನೇಲಿ ಹೀಗೆ ಯಾರೋ ಒಬ್ಬ ಹುಡುಗ ಇದ್ನಲ್ವೇ?

ನರಸಪ್ಪ

ಅದೇ ನಾಣೀ. ಅವನು...... ನಮ್ಮ........ಇವಳ........ತಮ್ಮ. ಅವನೂ ಚಿಕ್ಕಂದೇ ಅನಾಥನಾದ. ಇಲ್ಲೇ ಇದಾನೆ.

ಪುರೋಹಿತರು

[ಪಾನಕವನ್ನು ಮುಗಿಸಿ] ಸೊಗಸಾಗಿತ್ತು ಸ್ವಾಮೀ ಪಾನಕ.

ನರಸಪ್ಪ

ಅಪೂರ್ವವಾಗಿ ದಯಮಾಡ್ಸಿದ್ರಿ........

ಪುರೋಹಿತರು

ಮಧ್ಯಾಹ್ನವೇ ಬರಬೇಕಾಗಿತ್ತು.

ನರಸಪ್ಪ

ಏನು ಸಮಾಚಾರ?

ಪುರೋಹಿತರು

ಹೇಳ್ತೀನೆ........ಮಧ್ಯಾಹ್ನ ನಗರದಿಂದ ಬಂದೆ.

ನರಸಪ್ಪ

ನಗರದಿಂದ? ಹಾಗಾದ್ರೆ ಶ್ರೀಮಂತ ನೀಲಕಂಠರಾಯರನ್ನು ಕಂಡಿದ್ರಾ?

ಪುರೋಹಿತರು

ಅದೇ ವಿಷಯ ಹೇಳಬೇಕೂಂತ ಮಧ್ಯಾಹ್ನ ಊಟ ಮಾಡಿದವನೇ ತಮ್ಮ ಮನೇ ಕಡೆ ಹೊರಟೆ. ದಾರೀಲಿ ಆ ಶ್ಯಾನುಭೋಗ ವೆಂಕಟ

ರಾಮಯ್ಯನೋರು ಭೇಟಿಯಾಗಿ ಅವರ ಮನೆಗೆ ಕರಕೊಂಡೋದ್ರು. ಅಲ್ಲಿ ಮಾತು, ಕಥೆ, ಪಾನಕ, ಪಸಿವಾರ, ದಕ್ಷಿಣೆ, ತಾಂಬೂಲ........

**ನರಸಪ್ಪ**

ಎಲ್ಲಾ ಮುಗಿಸಿಕೊಂಡು ಬರೋಣಕ್ಕೆ ಇಷ್ಟು ಹೊತ್ತಾಗಿದೇನ್ರಿ.... ........ನಗರದಲ್ಲೀ............

**ಪುರೋಹಿತರು**

ಹೇಳ್ತೀನಿ ಕೇಳೀ. ಶ್ಯಾನುಭೋಗರ ಮನೇಲಿ ಹಾಗೇ ಮಲಗಿ ಕೊಂಡೆ. [ನರಸಪ್ಪ ಜುಗುಪ್ಸೆ ತೋರುವನು] ಈಗ ಎಚ್ಚರವಾಗಿ ಸರ್‍ರನೆ ಬಂದೆ. ಹಾಳಾದ್ದು ನಿದ್ರೆ ಬಂದುಬಿಡ್ತು.

**ನರಸಪ್ಪ**

ಚಿಂತೆಯಿಲ್ಲ............ಮದುವೇ ವಿಚಾರ ಏನಾದ್ರೂ ಎತ್ತಿದ್ರೋ ನೀಲಕಂಠರಾಯರು?

**[ಪ್ರವೇಶ (ಅ) : ಭಾಗಮ್ಮ.]**

[ಭಾಗಮ್ಮನು (ಅ) ಬಾಗಿಲ ಬಳಿ ಸ್ವಲ್ಪ ಕಾಣಿಸಿಕೊಂಡು ಆಲಿಸುತ್ತ ನಿಲ್ಲುವಳು.]

**ಪುರೋಹಿತರು**

ನೀಲಕಂಠರಾಯರ ಮನಸ್ಸಿನಲ್ಲೀನೋ ನಿಮ್ಮ ಮಗಳು ಜಯಮ್ಮನನ್ನ ಅವರ ಕುಮಾರರು ರಮೇಶರಾಯರಿಗೆ ತಂದುಕೋಬೇಕೂಂತ ಉದ್ದೇಶವಿದೆ.

**ನರಸಪ್ಪ**

[ಸಂತೃಪ್ತನಾಗಿ] ಶ್ರೀಮಂತರಾದಾಗ್ಯೂ ಹಳೇ ಸ್ನೇಹ ಮರೀದೆ ಅಭಿ

ಮಾನ ಇಟ್ಟಿದಾರಲ್ಲ. [ಭಾಗಮ್ಮನೂ ತೃಪ್ತಿಯನ್ನು ಸೂಚಿಸುವಂತೆ ತಲೆದೂಗುವಳು.]

### ಪುರೋಹಿತರು

ನಿಮ್ಮ ನಿಮ್ಮ ಬಾಲ್ಯಸ್ನೇಹ........ಎಲ್ಲಾ ವಿವರಾನು ಹೇಳಿದರೂನ್ನಿ. ಆದರೆ............

### ನರಸಪ್ಪ

ಆದರಲ್ಲಿ ಒಂದು 'ಆದರೇ'ನೂ ಇದ್ಯೇನು?........'ಆದರೆ' ಇನ್ನೇನೂ? ............ವರೋಪಚಾರದ ಪ್ರಸ್ತಾಪ ಏನಾದ್ರೂ ಬಂದಿತ್ತೋ ?

### ಪುರೋಹಿತರು

ಉಹುಹುಹುಂ. ಅದಲ್ಲ, ಅದಲ್ಲ, ಆದರೇ........ಈಗಿನ ಕಾಲದಲ್ಲಿ ವಧೂವರರು ಪರಸ್ಪರ ಒಪ್ಪೋದು ಎಲ್ಲಾದಕ್ಕಿಂತ ಮುಖ್ಯ ತಾನೆ?

### ನರಸಪ್ಪ

ಸರಿಯೇ. ಆಗಬಹುದು.

### ಪುರೋಹಿತರು

ಇದಕ್ಕಾಗಿ ವರ, ಅಂದರೆ ರಮೇಶರಾಯರು, ಮತ್ತು ಅವರ ಸ್ನೇಹಿತರು ಇನ್ಯಾರೋ ಒಬ್ಬರು – ಅವರ ಹೆಸರು ಮರೆತುಹೋಯ್ತು – ಅಂತು ಇಬ್ರೂ ಈ ದಿನ ರಾತ್ರಿ ಇಲ್ಲೀಗೆ ಬರ್ತಾರೆಂತೆ.

### ನರಸಪ್ಪ

ಈಗ?

### ಪುರೋಹಿತರು

ಈಗಲ್ಲ, ಇನ್ನು ಸ್ವಲ್ಪಹೊತ್ತಿಗೆ........ಕುದುರೇಗಾಡಿ ಪ್ರಯಾಣ

ನೋಡಿ. ಇಷ್ಟೊತ್ತಿಗೇ ಬರ್ತಾರೇಂತ ಹ್ಯಾಗೆ ಹೇಳೋದು? ಬರ್ತಾರೆ ಸ್ವಲ್ಪ ಹೆಚ್ಚುಕಡಮೆ.

## ನರಸಪ್ಪ

[ಎದ್ದು ತನ್ನಲ್ಲಿ] ಆಗ್ಲೇ ಆರು ಘಂಟೆ ಆಗ್ತಾ ಬಂತು. ಉಪಚಾರಕ್ಕೆ ಅಣಿ ಮಾಡಬೇಕು [ಮತ್ತೆ ಕುಳಿತು] ನೀಲಕಂಠರಾಯರೂ ಜೊತೇಲಿ ಬಂದ್ರೂ ಬರಬಹುದಲ್ವೆ?

## ಪುರೋಹಿತರು

ಅವರು ಇವರ ಜೊತೇಲಿ ಬರೋವುಟ್ಟಿಗೆ ಕಾಣೆ. ಜೋಡೀ ಗ್ರಾಮಕ್ಕೆ ಹೋಗಬೇಕಾದ ಕೆಲಸ ಏನೋ ಇದೆ ಅಂತ ಹೇಳಿದರು. ಅಲ್ಲಿ ಕೆಲಸ ಮುಗಿಯುತ್ಲೂ ಜೋಡೀಗ್ರಾಮದಿಂದ ನೇರವಾಗಿ ಇಲ್ಲಿಗೇ ಬಂದರೂ ಬರಬಹುದು. ಯಾವಾಗ ಬರ್ತಾರೋ, ಅಥವಾ ಬರೋದೇ ಇಲ್ವೋ, ಅಲ್ಲೇ ಕೆಲಸ ಹ್ಯಾಗಿದ್ಯೋ ಏನೋ,-ಅಂತು ಎಲ್ಲಾ ಅನುಮಾನ. ಇವರಿಬ್ರೇನೋ ಬರ್ತಾರೆ.

## ನರಸಪ್ಪ

ಒಳ್ಳೇ ಶುಭವಾರ್ತೆ ಹೇಳಿದಿರಿ. ನನ್ನ ಕಾಗದಕ್ಕೆ ಅಷ್ಟುಮಟ್ಟಿಗೆ ಮನ್ನಣೆ ಕೊಟ್ಟಿದಾರಲ್ಲ ನೀಲಕಂಠರಾಯರು. ಅದೇ ಸಂತೋಷ ನನಗೆ.

## ಪುರೋಹಿತರು

ನಿಮಗೆ ಮನ್ನಣೆ ಕೊಟ್ಟಿದಾರೆ. ನನಗೆ ವರನ ಜಾತಕಾನೂ ಕೊಟ್ಟಿದಾರೆ. ನಕ್ಷತ್ರಾನುಕೂಲವೊಂದಾಗಬೇಕಲ್ಲ.

### ನರಸಪ್ಪ

ಹೌದು ಹೌದು. ಮುಖ್ಯವಾಗಿ ತಮ್ಮ ಆಶೀರ್ವಾದ ಬಲದಿಂದ್ಲೇ ಎಲ್ಲಾ ಸಾಂಗವಾಗಿ ನಡೀಬೇಕಾಗಿದೆ ಶಾಸ್ತ್ರಿಗ್ಳೇ.

### ಪುರೋಹಿತರು

ಶುಭಮಸ್ತು. ಜಯಮ್ಮನ ಜಾತಕಾನೂ ಕೊಡಿ. ಎರಡನ್ನೂ ನೋಡಿದ್ಮೇನೆ ಒಂದ್ವೇಳೆ ನೀಲಕಂಠರಾಯರೂ ಬಂದು, ನಕ್ಷತ್ರಾನುಕೂಲವೂ ಆದ್ರೆ, ನಾಳೇ ದಿವಸವೇ ನಿಶ್ಚಿತಾರ್ಥವೂ ಆಗಬಹುದು.

### ನರಸಪ್ಪ

ಆಗತ್ಯವಾಗಿ ಆಗಬಹುದು.

### ಪುರೋಹಿತರು

ವರನ್ನ ತಾವು ನೋಡಿರಬೇಕು. ರಾಜನ ಹಾಗಿದ್ದಾನೆ. ಗುಣಾಢ್ಯ, ವಿನಯಸಂಪನ್ನ, ಯುವಕ, ವಿದ್ಯಾವಂತ—ಬಿ.ಎ. ಆಗಿದೆ.

### ನರಸಪ್ಪ

ನೋಡಿ ಬಹಳ ವರ್ಷ ಆಯ್ತು. ಆಗ ಅವನಿನ್ನೂ ಚಿಕ್ಕಹುಡುಗ. ಈಚೆಗೆ ನೋಡಿಲ್ಲ. ನೋಡೀ, ವಿದ್ಯಾಭ್ಯಾಸಕ್ಕೋಸ್ಕರ ಹುಡುಗರು ದೂರಸ್ಥಳಗಳಲ್ಲಿದ್ದು ಬಿಡ್ತಾರೆ. ಸ್ವಸ್ಥಳಕ್ಕೆ ಬರೋದೇ ಅಪೂರ್ವ

### ಪುರೋಹಿತರು

ಅಷ್ಟು ದೇಶ ತಿರುಗಿದ್ದಾರೆ. ಅಂಥಾ ವ್ಯಾಸಂಗ ಮಾಡಿದ್ದಾರೆ. ಆದರೂ ಒಂದು ಎಳ್ಳಷ್ಟಾದರೂ ಇಲ್ಲ ಸ್ವಾಮಿ ಅಹಂಕಾರ. ಮೇಲಾಗಿ ದೊಡ್ಡೋರು, ಚಿಕ್ಕೋರು ಅನ್ನೋ ತಾರತಮ್ಯಜ್ಞಾನ, ಭಯ,

ನಯ, ವಿನಯ, ಎಲ್ಲಾ ಇದೆ. ಅವರು ಬಂದ್ರೆ ತಮಗೇ ಗೊತ್ತಾಗುತ್ತೆ. ಅವರಿಗೆ ಸರಿಯಾದ ಉಪಚಾರ ನಡೀಲಿ. ನಾನಿನ್ನು ಆಹ್ನಿಕಕ್ಕೆ ಹೊರಡ್ತೀನೆ. ಜಯಮ್ಮನ ಜಾತಕ ಕೊಡಿ. ಜಾತಕ ನೋಡಿಕೊಂಡು ಮತ್ತೆ ಭೇಟಿ ಆಗ್ತೀನೆ. ಆಥವಾ ಆ ಶ್ಯಾಂಭಟ್ರು ಅಂತ ಏನೋ ಹೇಳಿದಿರಲ್ಲ, ಅವರನ್ನೇ ಕರೆಸೋದಾದ್ರೆ........

## ನರಸಪ್ಪ

ಉಂಟೇ ಸ್ವಾಮೀ? ಈ ದಿವಸ ಮೊದಲುಮಾಡಿಕೊಂಡು ವಿವಾಹ ಸಾಂಗವಾಗಿ ಆಗೋವರೆಗೂ ತಾವೇ ಪೌರೋಹಿತ್ಯ ವಹಿಸಬೇಕು.

## ಪುರೋಹಿತರು

ಆಗಲಿ. ಯಾಕೇಂದ್ರೇ ಆ ಶ್ಯಾಂಭಟ್ಟನಿಗೆ ಶುಭಕಾರ್ಯ ಮಾಡಿಸೋದಕ್ಕೆ ಬರೋದಿಲ್ಲ. ಇನ್ಯಾವುದಾದ್ರೂ ಮಂತ್ರ ಕೂಗಿಬಿಟ್ಟಾನು ಆಮೇಲೆ! ಎಷ್ಟೋಕಡೆ ಹಾಗೆ ಮಾಡಿದಾನೆ. ಅದೆಲ್ಲ ನಿಮಗೆ ಹ್ಯಾಗೆ ಗೊತ್ತಾಗುತ್ತೆ? ಅವನು ಬೇಡ, ನಾನೇ ಬರ್ತೀನೆ. ಇನ್ನಪ್ಪಣೆ ಕೊಡ್ತೀರಾ?

[ ಭಾಗಮ್ಮ ತಟ್ಟೆಯಲ್ಲಿ ತಾಂಬೂಲ, ಎರಡು ತೆಂಗಿನಕಾಯಿ, ದಕ್ಷಿಣೆ ತಂದು ಗಂಡನ ಕೈಗೆ ಕೊಡುವಳು. ನರಸಪ್ಪ ಅದನ್ನು ಪುರೋಹಿತರಿಗೆ ಕೊಟ್ಟು,]

## ನರಸಪ್ಪ

ನಮಸ್ಕಾರ. [ಕೈ ಮುಗಿಯುವನು.]

## ಪುರೋಹಿತರು

ಸಮಸ್ತ ಸನ್ಮಂಗಳಾನಿ ಭವಂತು.

### ನರಸಪ್ಪ

[ಜೋಬಿನಿಂದ ಜಾತಕವನ್ನು ತೆಗೆದು] ಇಗೋ ಜಯಮ್ಮನ ಜಾತಕ. [ಕೊಡುವನು.]

### ಪುರೋಹಿತರು

ಶುಭಮಸ್ತು.

[ನಿರ್ಗಮ (ಅ) : ಪುರೋಹಿತರು.]

### ನರಸಪ್ಪ

[ಹೆಂಡತಿಗೆ] ಕೇಳಿದೆಯೋ ಎಲ್ಲಾ ?

### ಭಾಗಮ್ಮ

[ಮುಂದೆ ಬಂದು] ಜಯೂ ಅದೃಷ್ಟ ಎಷ್ಟು ಕೊಂಡಾಡಿದ್ರೂ ತೀರದು. ಇಷ್ಟು ದಿನವಾದ್ರೂ ಉತ್ತರ ಬರದೇ ಇದ್ದದ್ದರಿಂದ, ಅವರು ಒಪ್ತಾರೋ ಇಲ್ವೋ ಅಂದ್ಕೊಂಡಿದ್ದೆ. ಅಂಥಾ ಶ್ರೀಮಂತರು ನಮ್ಮಂಥ ಬಡವರ ಸಂಬಂಧಕ್ಕೆ ಒಪ್ಪಿದ್ದೋದು ಭಾಳಾ ಆಶ್ಚರ್ಯ........ಹಿಂದೆ ನಿಮ್ಮ ಜೊತೇಲಿ ಓದ್ತಾ ಇದ್ರೋ ಆ ನೀಲ್ಕಂಠ್ರಾಯ್ರು ?

### ನರಸಪ್ಪ

ನನ್ನ ಹಳೇಕಥೆಗ್ಳು ಕಂಡ್ರೆ ಆಗೋದಿಲ್ಲಾಂತೇ!....... ಹೋಗ್ಲಿ, ರಮೇಶರಾಯರು ಈಗಿನ ಕಾಲದೋರು ಜಯೂಗೆ ಈಗಿನ ಕಾಲದ ರೀತಿ ಅಲಂಕಾರ ಮಾಡು.

### ಭಾಗಮ್ಮ

ಈಗಿನ ಕಾಲ ಕಂಡ್ರೆ ಆಗೋದಿಲ್ಲಾಂದ್ರೀ!

## ನರಸಪ್ಪ

ಆದರ ಸಂದರ್ಭ ಬೇರೆ. ಅದನ್ನೆಲ್ಲ ಆಮೇಲೆ ನಿಧಾನವಾಗಿ ಚರ್ಚಿಸೋಣ. ಈಗ ಹೊತ್ತಾಗ್ತಾಗ್ತಿದೆ. ಈಗಲೋ ಆಗಲೋ ಬರುತ್ತೆ ಪಟ್ಟಿಗೆ ಗಾಡಿ. ಊಟ ಉಪಚಾರ ಎಲ್ಲಾ ಪ್ರಶಸ್ತವಾಗಿರಬೇಕು. ಏನೇನು ಸಿದ್ಧಪಡಿಸಿಕೊಂಬೇಕೋ ನೋಡಿಕೋ.

## ಭಾಗವ್ವ

ಮನೇಲಿ ಬೇಕಾದಷ್ಟು ತಿಂಡೀ ಸಾಮಾನು ಇದ್ದೇ ಇದೆ—ಚಕ್ಲಿ, ಚಿರೋಟಿ, ಲಾಡು, ಜಿಲೇಬಿ, ಎಲ್ಲಾ ಇದೆ. ಜಯೂನೂ ಅಲಂಕಾರ ಮಾಡಿಕೊಂಡೇ ಇದಾಳೆ. ಇನ್ನು ಬಿಸಿ ಅಡಿಗೆ ಒಂದಾಗಬೇಕು, ಅಷ್ಟೆ.

## ನರಸಪ್ಪ

ಸರಿ....ಅವರು ಬರುತ್ಲೂ ಮೊದಲು ತಿಂಡಿ ಕಾಫಿ ಕೊಡಬೇಕು .... ಆಮೇಲೆ ಕಾಲಿಗೆ ಬಿಸಿನೀರು....ಸಂಧ್ಯಾವಂದನೆಗೆ ಅಣಿಮಾಡಬೇಕು. ದೊಡ್ಡ ಮಣೆಗಳನ್ನ ತೊಳೆದಿಡು. ಜೋಂಪಾತ್ರೆ, ಮಗುಟ ಅಣಿ ಮಾಡು. ಊಟ ಆದ್ಮೇಲೆ ತಾಂಬೂಲಕ್ಕೊಂಚೆ ಹಣ್ಣು—ನಾನು ಹೋಗಿ ತಕೊಂಡು ಬರ್ತೇನೆ ಈಗ.......ಅಡಿಕೇಪುಡಿಂಗೆ ಪಚ್ಚ ಕರ್ಪೂರ ಸೇರಿಸು....ಅವರು ತಾಂಬೂಲ ಹಾಕ್ಕೊಳ್ಳೋವಾಗ ಜಯೂ ಹಾಡ್ಹೇಳಿದರೆ ಮೇಲಲ್ವೇ?

## ಭಾಗವ್ವ

ಆದನ್ನೆಲ್ಲ ನಾನ್ನೋಡ್ಕೋತೀನಿ. ನಿಮಗ್ಯಾಕೆ — "ಗಂಡಸಿಗ್ಯಾಕೆ ಗೌರೀ ದುಃಖ" ಅಂತ! .... .......ನೀವೂ ಒಂದು ಶಲ್ಯ ಭುಜದ ಮೇಲ್ಹಾಕ್ಕೊಂಡೂ...........

### ನರಸಪ್ಪ

ಗೌರೀ ದುಃಖದ ಜೊತೆಗೆ ಗಣೇಶನ ದುಃಖಾನೂ ನಿನಗೇ ಇದೆ ಯಲ್ಲಾ ! ಕೊಡು ಕೊಡು, ಆ ಶಲ್ಯ ಕೊಡು ಇಲ್ಲಿ. ಇರಲಿ. [ಭಾಗಮ್ಮ ಸಲುವಿನ ಮೇಲಿರುವ ಶಲ್ಯ ಕೊಡುವಳು. ನರಸಪ್ಪ ಅದನ್ನು ಧರಿಸುವನು.] ಹಾಗೇ ಆ ಚಿಕ್ಕಬುಟ್ಟಿ ಕೊಡು, ಹಣ್ಣು ತರೋದಕ್ಕೆ [ಕೊಡುವಳು] ಹಣ್ಣು ತಂದರೆ ಅಲ್ಲೀಗೆ ಎಲ್ಲಾ ಆಧಾಗಾಯ್ತಲ್ಲ ?

### ಭಾಗಮ್ಮ

ಊಂ........ಆದರೇ........

### ನರಸಪ್ಪ

ಆದರೆ ಏನು ಹೇಳು, ಅದನ್ನೂ ತಕೊಂಡು ಬರ್ತೀನಿ.

### ಭಾಗಮ್ಮ

ಆದರೆ ಅವರು ಬರೋಹೊತ್ತಿಗೆ ಸರಿಯಾಗಿ ನಾಣೀನೂ ಮನೆಗೆ ಬಂದ್ರೆ ಚನ್ನಾಗಿರುತ್ತೆ. ಎಲ್ಹೋದ್ನೋ, ಎಷ್ಹೊತ್ತಿಗೆ ಬರ್ತಾನೋ ಏನೋ............

### ನರಸಪ್ಪ

[ತನ್ನಷ್ಟೆ] ಅವನು ಇನ್ನೆರಡು ದಿವ್ಸ ಮನೆಗೆ ಬರದೇ ಇದ್ರೆ ವಾಸಿ. ಬಂದೋರೆದುರಿಗೆ ಏನು ಕೋತಿಚೇಷ್ಟೆ ಮಾಡ್ತಾನೋ ಏನೋ ನ್ನೋದೇ ನನಗೆ ಭಯ.

### ಭಾಗಮ್ಮ

ಅಂದ್ಹಾಗೆ, ಪುರೋಹಿತರಿಗೆ ನಾಣೀ ಜಾತಕಾನೂ ಕೊಟ್ಟಿದ್ದರೆ ಚನ್ನಾಗಿತ್ತು. ಅವನ ಮದ್ವೇನೂ ಇದರ ಜೊತೇಲಿ ಮಾಡಬೇಕಷ್ಟೆ.

### ನರಸಪ್ಪ

[ತನ್ನಲ್ಲಿ] ನಾಣೀಗೆ ಮದುವೆ! ನಳಿನಿ ಅದೃಷ್ಟಕ್ಕೆ ಪಾರವೇ ಇಲ್ಲ. [ಹೆಂಡತಿಗೆ] ನಳಿನೀ ಒಪ್ತಾಳೋ? ಅವಳಿಗೂ ನಾಣೀಗೂ ಅಷ್ಟಕ್ಕಷ್ಟೇ ಅಂತೆ, ಮೊನ್ನೆ ಏನೋ ನೀನು......?

### ಭಾಗಮ್ಮ

ಒಪ್ದೇ ಏನ್ಮಾಡ್ತಾಳೆ? ಅಷ್ಟಕ್ಕಷ್ಟೇ ಅಷ್ಟೆ, ಅವಳ ತಾಯಿ ಒಡವೆ ನನ್ನ ಹತ್ತಿರ ಇದೆಯಲ್ಲ......ಅದು ಅವಳಿಗೂ ಗೊತ್ತಿದೆ.

### ನರಸಪ್ಪ

ಆಗಲಿ ನೋಡೋಣ, ಅದು ನಮ್ಮ ಕೈಯಲ್ಲಿರೋ ಕೆಲಸ. ಸಧ್ಯ ರಮೇಶ, ಜಯು ಒಪ್ಪೋದು ಮುಖ್ಯ. ಹೊತ್ತಾಯ್ತು, ಅಡಿಗೇಗಿಡು ಹೋಗು. ನಾನು ಅಂಗಡೀಗ್ಹೋಗಿ ಬರ್ತೀನಿ. [(ಅ) ವರೆಗೆ ಹೋಗಿ ಹಿಂದಕ್ಕೆ ಬಂದು] ಆ ಬೆಳ್ಳಿ ಪಾತ್ರೆ ಸಾಲ್ದೇ ಬಂದ್ರೇ, ಆ ಸಾಹುಕಾರ್ರ ಮನೆಯಿಂದ ತರಿಸಿರು ಒಂದು ದಿವ್ಯ ಫ್ರೂತರ್; ಬೋರನ್ನ ಕಳಿಸಿದ್ರೆ ಕೊಡ್ತಾರೆ. [ಮತ್ತೆ ಬೇಗ ಬೇಗ (ಅ) ವರೆಗೆ ಹೋಗಿ ಹಿಂದಕ್ಕೆ ಬಂದು] ಹಿತ್ಲು ಬಾಗ್ಲಿಂದ ಕಳಿಸು ಬೋರನ್ನ, ಹಿತ್ಲು ಬಾಗ್ಲಿಂದ.

[ ನಿರ್ಗಮ (ಅ) : ನರಸಪ್ಪ. ]

### ಭಾಗಮ್ಮ

ಜಯೂ.........ನಳಿನೀ,........

**[ಪ್ರವೇಶ (ಅ) : ಜಯು ಮತ್ತು ನಳಿನಿ.]**

ಈ ಪಾತ್ರೆಗಳನ್ನು ತೆಗೆದೂ, ಇಲ್ಲೆಲ್ಲಾ ಸ್ವಲ್ಪ ಸರಿಮಾಡ್ರಮ್ಮ. ನಾ ಹೋಗಿ ಅಡಿಗೇಗಿಡ್ತೀನಿ.

[ನಿರ್ಗಮ (ಅ) : ಭಾಗಮ್ಮ.]

ಜಯು

ನಳಿನಿ, ಈ ಹೂ ಸರಿಯಾಗಿ ಮುಡಿಸು.

ನಳಿನಿ

ಮುಡಿಸೋರು ಬರ್ತಾರೆ ಇದ್ದಾರೆ ಊರಿಂದ, ತಾಳು ಜಯೂ. ಕೇಳಿದ್ಯೋ ಇಲ್ವೋ ಮಾತು ಕಥೆ ಎಲ್ಲಾ? [ಎನ್ನುತ್ತ ಹೂ ಸರಿಮಾಡ ತೊಡಗುವಳು.]

ಜಯು

ನಾ ಒಳಗಿದ್ದೆ. ಸರಿಯಾಗಿ ಕೇಳಿಸ್ಲಿಲ್ಲ

ನಳಿನಿ

[ಹೂ ಮುಡಿಸುತ್ತ] ನಾನೀ ಬಾಗ್ಲಲ್ಲೇ ಇದ್ದು ಎಲ್ಲಾ ಕೇಳಿದೆ....... ರಮೇಶರಾಯರೂ, ಯುವಕರಂತೆ. [ಜಯು ಕಿರುನಗೆ ತೋರುವಳು] ರಾಜನ ಹಾಗಿದ್ದಾರಂತೆ [ಜಯು ಕಣ್ಣರಳಿಸುವಳು] ತುಂಬಾ ನಾಚಿಕೇ ಸ್ವಭಾವಾನಂತೆ [ಜಯು ಅಸಮಾಧಾನವನ್ನು ಸೂಚಿಸುವಳು] ಈಗ ಸರಿಹೋಯ್ತೇನೋ ನೋಡಿಕೋ ಹೂವು [ಎನ್ನುತ್ತ ಮುಂದೆ ಬಂದು] ಏನು, ಮಾತಾಡೋದೇ ಇಲ್ಲಾ? ಈಗ್ಲೇ ಮದವಣಿಗಿತ್ತಿ ಆಗಿಬಿಟ್ಟೆದ್ದೀ.

ಜಯು

ನೀನೂ ನನ್ನ ಜೊತೇಲೇ ಮದವಣಿಗಿತ್ತಿ ಆಗ್ತೀಯಂತ ಅಮ್ಮ ಹೇಳಿದ್ದು ಕೇಳಿಸ್ಲಿಲ್ವೋ?

ನಳಿನಿ

ಜಯೂ ನನ್ನ ಹೀಗೆ ಹಾಸ್ಯ ಮಾಡೋದಕ್ಕೆ ನಿನಗೆ ಮನಸ್ಸಾದರೂ

ಹೇಗೆ ಬರುತ್ತೇ?...........[ಚಿಂತೆಯಿಂದ] ನಾಣೀ ಕೈ ಹಿಡಿದು ನಾನೇನು ಸುಖಪಡಬೇಕು?

ಜಯು

ಅದೇನೋ ನಿಜವೇ. ಆದರೆ ಅಪ್ಪ ಬಿಡೋದಿಲ್ಲ. ನಿನ್ನ ತಾಯಿ ಸಹ ನಾಣೀಗೇ ಕೊಡಬೇಕು ಅಂತ ಹೇಳಿದ್ದರಂತೆ. ಆಕೆ ಒಡವೆ ಸಹ ಈಗ ಅಪ್ಪನ ಹತ್ತರ ಇದೆಯಲ್ಲ.

ನಳಿನಿ

ಅದು ನನಗೆ ಬಾರದಿದ್ದರೂ ಚಿಂತೆಯಿಲ್ಲ. ನಾನು ನಾಣೀನ ಮದುವೆ ಆಗೋದಿಲ್ಲ.

ಜಯು

ಮತ್ತೆ ಯಾರನ್ನ ಮದುವೆ ಆಗ್ತೀ?

ನಳಿನಿ

ನಮ್ಮ ಮನಸಿನಲ್ಲಿರೋರು ನಮಗೆ ಸಿಗ್ತಾರ್ಯೇ?

ಜಯು

ಯಾರು ಹೇಳು ಕೇಳೋಣ. ನನ್ನ ಮುಂದೆ ಹೇಳಬಾರದೆ?

ನಳಿನಿ

ಮತ್ತೆ ಯಾವಾಗಲಾದರೂ ಹೇಳ್ತೀನೆ.

ಜಯು

ಅವರಿಗೆ ನಿನ್ನಲ್ಲಿ ಅನುರಾಗ ಇದ್ಯೇ?

**ನಳಿನಿ**

ಇರಬೇಕು.

**ಜಯು**

ಹೆಸರು ?

**ನಳಿನಿ**

ಹೋಂಗೆ [ಎಂದು ನಾಚಿಕೆಯಿಂದ ಆಚೆ ತಿರುಗುವಳು.]

**ಜಯು**

ಹೇಳೋದಿಲ್ವೋ? ಮದುವೆ ಇನ್ನೂ ಆಗ್ಲಿಲ್ಲ ಏನೂ ಇಲ್ಲ, ಹೆಸರು ಹೇಳಬಾರದೇ ?

**ನಳಿನಿ**

ಈಗ ಬರೋರ ಹೆಸರು ನೀನು ಹೇಳು ನೋಡೋಣ.

**ಜಯು**

ಊಂ, ಹೋಂಗೆ [ಎಂದು ನಾಚಿಕೆಯಿಂದ ಈಚೆ ತಿರುಗುವಳು.]

**ನಳಿನಿ**

ಇದ್ಯಾವ ನ್ಯಾಯ ?

**[ಪ್ರವೇಶ (ಅ) : ನಾಣಿ.]**

[ನಾಣಿ ಪ್ರವೇಶಿಸಿದ್ದನ್ನು ಜಯು ನಳಿನಿ ನೋಡುವುದಿಲ್ಲ. ನಾಣಿ ತನ್ನ ಮುಖದ ಮೇಲೆ ಟಾಕವನ್ನು ಮುಚ್ಚಿಕೊಂಡು ಹಿಂದಿನಿಂದ ಬಂದು]

**ನಾಣಿ**

ಭೂ........[ಎಂದು ಹೆದರಿಸುವನು.]

**ಜಯು ಮತ್ತು ನಳಿನಿ**

[ಬೆಚ್ಚಿ] ಅಯ್ಯೊ! [ಎಂದು ಕುರ್ಚಿಯ ಹಿಂದೆ ಅವಿತುಕೊಳ್ಳುವರು.]

*

### ನಾಣಿ

[ಮುಖದ ಮೇಲಿನ ಚಾಕವನ್ನು ತೆಗೆದು]ಅಹಹಹ, ಏನು ಧೈರ್ಯಾನ್ರೀ ನಿಮ್ಮ ಧೈರ್ಯ!

### ಜಯು

ಅಯ್ಯೋ, ನಾಣೀ ಕಣೇ, ಇನ್ನೇನೂ ಅಲ್ಲ. [ಇಬ್ಬರೂ ಕರ್ಟನ್ ಹಿಂದಿನಿಂದ ಈಚೆಗೆ ಬರುವರು.] ಹೋಗಪ್ಪ ನಾಣಿ ನೀ ಯಾವಾಗ್ಲೂ ಹೀಗೇ.

### ನಾಣಿ

ಯಾವಾಗ್ಲೂ ಹೀಗೇ ಆದ್ರೆ ಹೆದರೋದಿನ್ಯಾಕೆ?

### ನಳಿನಿ

ಹುಡುಗಾಟ ಇಷ್ಟೇ ಇದೆ..........ಆ ಪಾತ್ರೆ ತಕೋ ಜಯೂ, ಹೋಗೋಣ........ಆಗ್ಲೋ ಈಗ್ಲೋ ಬರೋ ಹೊತ್ತು. [ನಳಿನಿ ಜಯು ಇಬ್ಬರೂ ಪಾತ್ರೆಗಳನ್ನು ತೆಗೆದುಕೊಳ್ಳುವರು.]

### ನಾಣಿ

ಯಾರು ಬರೋ ಹೊತ್ತು?

### ಜಯು

ಯಾರೋ........[ಎಂದು ನಾಚಿಕೆಯಿಂದ ಒಳಕ್ಕೆ ಹೋಗುವಳು.]

[ನಿರ್ಗಮ (ಅ) : ಜಯು.]

### ನಾಣಿ

[ಒಳಕ್ಕೆ ಹೋಗುತ್ತಿರುವ ನಳಿನಿಯನ್ನು ಕುರಿತು] ಯಾರು ನಳಿನೀ, ಬರೋದು?

**ನಳಿನಿ**

ನಗರದ ನೀಲಕಂಠರಾಯರ ಮಗ. ಜಯೂನ್ನೋಡೋಕೆ ಬರ್ತಾರಂತೆ.

**[ನಿರ್ಗಮ (ಅ) : ನಳಿನಿ.]**

**ನಾಣಿ**

[ತನ್ನಲ್ಲಿ] ಓಹೋ! ನೀಲಕಂಠರಾಯರ ಮಗನಿಗೆ ಜಯೂನ ಕೊಡಬೇಕು ಅಂತ ಮನೇಲಿ ಮಾತಾಡಿಕೋತಾ ಇದ್ದದ್ದು ಕಿವೀಲಿ ಬಿದ್ದಿತ್ತು ಇತ್ತೀಚಿಗೆ............ಈ ಮದುವೇ ವಿಚಾರವೇ ಆಗ್ಲಿ, ಇನ್ಯಾವ ವಿಚಾರವೇ ಆಗ್ಲಿ, ನನಗೆ ತಿಳಿಸ್ಲೇ ಬೇಡವೇ ಈ ಭಾವ? ನಾನು ಅಂದ್ರೆ ಎಷ್ಟು ತಾತ್ಸಾರವಾಗಿ ಕಾಣ್ತಾನೆ ಭಾವ! ನಾನೇನು ಕಡಮೆ ಆಸಾಮಿನೇ? ಈ ಹೊತ್ತೋ ನಾಳೆಯೋ ಮೆಜಾರಿಟೀಗೆ ಬರೋ ಖದೀಮ, ಅಪ್ಪನ ಆಸ್ತೀನೂ ಇದೆ. ಇಂಥೋವನನ್ನು ಇಷ್ಟು ತಾತ್ಸಾರವಾಗಿ ಕಾಣೋದೇ? ಒಳ್ಳೇದು, ಕೊಡ್ತೀನಿ ಗಸ್ತು ಈ ಭಾವನಿಗೆ, ಸಮಯ ಸಿಕ್ಲಿ. ನಾಣಿ ಅಂದರೆ ಏನೋ ಅಂತ ತಿಳ್ಕೊಂಡು ಬಿಟ್ಟಿದಾನೆ. ಇರಲಿ, ಇರಲಿ. ........[(ಅ) ಕಡೆ ನೋಡಿ] ಯಾವುದೋ ಪೆಟ್ಟಿಗೇ ಗಾಡಿ ಬಂತಲ್ಲ ಮನೇ ಮುಂದೆ! ........ಜೊತೆಗಿನ್ನೊಬ್ಬರು ಯಾರೋ ಬಂದ್ಹಾಗಿದೇ........ನಾನು ಸ್ವಲ್ಪ ಈಚೇ ಇರೋದು ಮೇಲು [ಎಂದು (ಕ) ಕುರ್ಚಿಯ ಹಿಂದೆ ನಿಂತುಕೊಳ್ಳುವನು.]

**[ಪ್ರವೇಶ (ಅ) : ಚಂದು ಮತ್ತು ರಮೇಶ್.]**

[ಚಂದು ತೊಗಲಿನ ಕೈ ಪೆಟ್ಟಿಗೆಯನ್ನೂ, ರಮೇಶನು ಚಿತ್ರವನ್ನೂ ಹಿಡಿದಿರುವರು. ಅವರು ಪ್ರವೇಶಿಸಿದ ಕೂಡಲೇ ನಾಣಿ ಅವರಿಗೆ ಕಾಣಸದಂತೆ

ಕುರ್ಚಿಯ ಹಿಂದೆ ಅವಿತುಕೊಳ್ಳುವನು. ಚಂದು ಮತ್ತು ರಮೇಶ್ (ಲ) ಎಂಬಲ್ಲಿ ನಿಂತುಕೊಳ್ಳುವರು.]

ಚಂದು

[ಸುತ್ತಲೂ ನೋಡಿ] ಇದು ಯಾರ ಮನೇನೋ ಏನೋ, ಯಾರೂ ಇದ್ದಾಗೆ ಕಾಣ್ಸೋದಿಲ್ಲ, ಅಥವಾ ಒಳಗೇನಾದರೂ ಇದ್ದಾರೋ ಏನೋ, ಹ್ಯಾಗೆ ಮಾತಾಡಿಸೋದು ರಮೇಶ್, ಪ್ರಯಾಣ ದಲ್ಲಿ ದಾರೀತಪ್ಪೋರ ಅವಸ್ಥೆ ಯಾರಿಗೂ ಬೇಡ.

ರಮೇಶ್

ನನಗಂತೂ ಪ್ರಯಾಣ ಸಾಕಾಗ್ಹೋಯ್ತು. ನಗರದಿಂದ ರಾಯಾ ಪುರಕ್ಕೆ ಎರಡೂವರೆ ಗಾವುದ ದಾರಿ ಅಂತ ಅಪ್ಪಾಜಿ ಹೇಳಿದರು. ಆದರೆ ನಾವೀಗ ಬಂದಿರೋದೇ ಮೂರು ನಾಲಕ್ಕು ಗಾವುದ ಆದ್ಹಾ ಗಿದೆ. ಯಾವ ಊರಿಗೆ ಬಂದುಬಿಟ್ಟಿದೇವೋ ಏನೋ. ಅಂತು ದಾರಿ ತಪ್ಪಿದೇವೇನ್ನೋದರಲ್ಲೇನೂ ಸಂಶಯವಿಲ್ಲ. ಇಲ್ಲೀಗಿನ್ನೂ ಎಷ್ಟು ದೂರ ಇದೆಯೋ ಏನೋ ಆ ನರಸಪ್ಪನೋರಿರೋ ರಾಯಪುರಾ ನ್ನೋದು !

ಚಂದು

ಎಲ್ಲ ನಿನ್ನ ಬಿಗುಮಾನದ ಫಲ. ಅಲ್ಲಲ್ಲಿ ದಾರಿ ವಿಚಾರಿಸಿಕೊಂಡು ಬರೋಣ ಅಂದ್ರೆ ಬೇಡ ಅಂದೆ. ಇಲ್ದಿದ್ರೆ ಈ ವೇಳೆಗೆ ಸುಖವಾಗಿ ಊರು ಸೇರುತಾ ಇದ್ದೆವು.

ರಮೇಶ್

ದಾರೀಲಿ ಸಿಕ್ಕಿದೋರನ್ನೆಲ್ಲ ಕೇಳೋದು ನನಗೆ ಬೇಕಾಗ್ಲಿಲ್ಲ ಚಂದು. ಅವರು ಏನೋ ಮಹದುಪಕಾರಮಾಡಿದ್ಹಾಗೆ ಜವಾಬ್ ಕೊಡೋದು,

ಇಲ್ಲವೆ ಅಸಡ್ಡೆಯಾಗಿ ಏನೋ ಹೇಳ್ತಾ ಹೊರಟ್ಹೋಗೋದು—ಚನ್ನಾಗಿರುತ್ತೈ, ಹೇಳು.

ಚಂದು

ಆಯ್ತಲ್ಲ, ಈಗೇನು ಮಾಡೋಣ ಹೇಳು.

ರಮೇಶ್

ಈಗಿನ್ನೇನು, ಈ ಮನೇಲಿ ಯಾರಾದರೂ ಇದ್ದರೆ ವಿಚಾರಿಸೋಣ. ಇಲ್ಲೆಲ್ಲಾದರೂ ಹತ್ತಿರ ಹೊಟೇಲು ಇರೋದಾದರೆ ಈ ರಾತ್ರಿ ಹೊಟೇಲಿನಲ್ಲೇ ಇದ್ದುಬಿಟ್ಟು, ಬೆಳಗ್ಗೆ ರಾಯಾಪುರಕ್ಕೆ ಪ್ರಯಾಣ ಮುಂದರಿಸೋಣ. ಅಥವಾ ರಾಯಾಪುರ ಏನಾದರೂ ಇಲ್ಲಿಗೆ ಹತ್ತಿರದಲ್ಲೇ ಇರೋದಾದ್ರೆ ಈಗಲೇ ಹೋಗಿಬಿಡೋಣ.

ನಾಣಿ

[ (ಯ) ಎಂಬಲ್ಲಿಗೆ ಬಂದು, ತನ್ನಲ್ಲಿ ] ಓಹೋ, ಈ ರಾಯರುಗಳಿಗೆ ಪರಪಾಟಾಗಿದೆ, ಪಾಪ! ಇದೇ ರಾಯಾಪುರ, ಇದೇ ನರಸಪ್ಪನ ಮನೇನ್ನೋದು ಗೊತ್ತುಹತ್ತಿಲ್ಲ. ಎಲ್ಲೀಗೋ ಬಂದುಬಿಟ್ಟೆದೀವೀಂತ ತಿಳಕೊಂಡು ಬಿಟ್ಟಿದಾರೆ. ಪ್ರಯಾಣ; ಕತ್ತಲುಹೊತ್ತು .. ........ ಒಳ್ಳೇದು. ಈಗ ಈ ಭಾವನಿಗೆ ಗಸ್ತುಕೊಡ್ತೇನಿ. [ಎಂದು ಎದೆಯ ಮೇಲೆ ಕೈ ಬಿಗಿದುಕೊಂಡು ಗಂಭೀರವಾಗಿ ನಿಂತು ಒಂದು ಸಲ ಕೆಮ್ಮುವನು.]

ಚಂದು

ಓಹೋ, ಇವರು ಯಾರೋ ಸಿಕ್ಕಿದರಲ್ಲ ...... [ನಾಣಿಗೆ] ರಾಯರೇ .......... [ರಮೇಶನಿಗೆ ಮೆಲ್ಲನೆ] ಏನಪ್ಪಾ, ಇವರು ಮಾತಾಡೋದೇ ಕಷ್ಟವಾಗಿದೆಯಲ್ಲಾ ..........

ರಮೇಶ್

[ಮೆಲ್ಲನೆ] ಆದಕ್ಕೇ ನಾ ಹೇಳಿದ್ದು—ಕಂಡಕಂಡೋರನ್ನೆಲ್ಲ ಮಾತಾಡಿಸಬಾರದು ಅಂತ ...... ... ಇನ್ನೊಂದು ಸಲ ಮಾತಾಡಿಸಿನೋಡು, ಜವಾಬ್ ಬರದೇ ಇದ್ರೆ ಹೋಗಿಬಿಡೋಣ.

ಚಂದು

[ನಾಣಿಗೆ] ಸ್ವಾಮೀ, ....

ನಾಣಿ

ಏನೂ ?

ಚಂದು

ಏನೂ ಇಲ್ಲಾ ......... ಇದು ಯಾವ ಊರು ?

ನಾಣಿ

ಇದು ಊರಲ್ಲ ಸ್ವಾಮೀ, ಇದೊಂದು ಹಳೇ ಛತ್ರದಂಥಾ ಕಟ್ಟಡ.

ಚಂದು

[ರಮೇಶನಿಗೆ ಮೆಲ್ಲನೆ] ಇವನೇನೋ ಅಧಿಕ ಪ್ರಸಂಗಿ ಹಾಗೆ ಕಾಣಿಸ್ತಾನೆ; ತಾಳು. [ನಾಣಿಗೆ] ಇದು ಹಳೇ ಕಟ್ಟಡ ಅನ್ನೋದೇನೋ ಗೊತ್ತಾಗುತ್ತೆ ಸ್ವಾಮಿ ಆದರೆ ಈ ಹಳೇಕಟ್ಟಡ ಇರೋದು ಯಾವೂರಲ್ಲೀಂದೆ.

ನಾಣಿ

ಇದು ಊರಲ್ಲಿಲ್ಲ ಸ್ವಾಮೀ. ಊರಿಗೆ ಸ್ವಲ್ಪ ದೂರದಲ್ಲಿದೆ. ಆದರೆ ತಾವು ಯಾರೋ . .....

ಚಂದು

ನಾವೂ ..........ಮಾರ್ಗಸ್ಥರು.

ನಾಣಿ

ಯಾವೂರಿಂದ ದಯಮಾಡಿಸೋಣಾಯ್ತೋ.........

ಚಂದು

ನಗರದಿಂದ.

ನಾಣಿ

ಯಾವೂರಿಗೆ ದಯಮಾಡಿಸಬೇಕೋ . . .

ಚಂದು

ರಾಯಾಪುರಕ್ಕೆ.

ನಾಣಿ

ಈ ವೂರಿನ ಹಿಂದೆ ನಿಮಗೆ ಯಾವೂರು ಸಿಕ್ಕಿತ್ತೂ ?

ಚಂದು

ತಿಳಿಯದು. ಕತ್ತಲೆಯಾಗಿವೆ, ಮೋಡ ಕವಿದಿದೆ. ಈ ದಾರಿಯ ವಿವರವನ್ನೆಲ್ಲ ತಿಳಿಸಿ ಉಪಕಾರ ಮಾಡಬೇಕು..

ನಾಣಿ

ಮಹನೀಯರೇ, ಹಿಂದಿನ ಮಾರ್ಗ, ಪ್ರಕೃತ ಮಾರ್ಗ, ಮುಂದಿನ ಮಾರ್ಗ, ಈ ಮೂರೂ ತಿಳಿಯುವಮೇಲೆ, ತಮಗೆ ಮುಖ್ಯವಾಗಿ ಒಂದು ವಿಷಯ ತಿಳಿಸಬೇಕಾಗಿದೆ ........... ಏನೂ ಅಂದರೇ...........
ನೀವೂ...... ....ಮಾರ್ಗಭ್ರಷ್ಟರಾಗಿದ್ದೀರಿ.

ಚಂದು

ಅದನ್ನು ಹೇಳೋದಕ್ಕೆ ನೀವೇ ಆಗಬೇಕೇ ?

ನಾಣಿ

ಅಲ್ಲ, ಇರೋ ವಿಷಯ ಹೇಳಿದೆ, ಸಿಟ್ಟಾಗಬೇಡಿ...... ......ಹೋಗಲಿ ಈ ದಿವಸ ತಾವು ಹೊರಟದ್ದು ಯಾವೂರಿಂದಾ ?

ರಮೇಶ್

ಮುಂದಿನ ದಾರಿ ಹೇಳೋದಕ್ಕೆ ಅದು ನಿಮಗೆ ಅವಶ್ಯಕವಲ್ಲವಷ್ಟೆ?

ನಾಣಿ

ಚಿಂತೆಯಿಲ್ಲ. ನೀವು ಹೋಗಬೇಕಾಗಿರೋ ರಾಯಾಪುರ ಯಾವುದು?

ರಮೇಶ್

ರಾಯಾಪುರ ಯಾವುದು ಅಂದರೆ ನಾವೇನು ಹೇಳೋಣ? ನಿಮಗೆ ದಾರಿ ಹೇಳೋ ಮನಸ್ಸಿದೆಯೋ ಇಲ್ಲವೋ......

ನಾಣಿ

ಹಾಗಲ್ಲ ಸ್ವಾಮಿ. ಈ ಪ್ರಾಂತದಲ್ಲಿ ಎರಡು ರಾಯಾಪುರಗಳಿವೆ—ದೊಡ್ಡರಾಯಾಪುರ, ಗಿಡ್ಡರಾಯಾಪುರ ಅಂತ. ನೋಡಿದ್ರಾ ?

ರಮೇಶ್

ಎರಡು ರಾಯಾಪುರಗಳಿರೋದು ನಮಗ್ಗೊತ್ತಿಲ್ಲಾ !

ನಾಣಿ

ಇವೆ ಸ್ವಾಮಿ, ಇವೆ—ಇರಡೂ ಇವೆ. ಆ ದೊಡ್ಡರಾಯಾಪುರ ಅನ್ನೋದು ಹತ್ತಿರವೇ ಇದೆ. ಗಿಡ್ಡರಾಯಾಪುರ ಸ್ವಲ್ಪದೂರ ಇದೆ. ಒಂದು ಈ ದಿಕ್ಕು, ಇನ್ನೊಂದು ಆ ದಿಕ್ಕು. ನಾನು ಒಂದು ರಾಯಾಪುರದ ದಾರಿ ಹೇಳೋದು, ನೀವು ಇನ್ನೊಂದಕ್ಕೆ ಹೋಗಬೇಕಾಗಿ

ರೋದು — ಹೀಗಾಗಬಾರದೂಂತ್ಲೇ ನಾ ಕೇಳಿದ್ದು : ಯಾವ ರಾಯಾಪುರಾಂತ.

ಚಂದು

ಯಾವ ರಾಯಪುರವೋ ಏನೋ ... ... ಅಲ್ಲಿ ನರಸಪ್ಪನೋರು ಅಂತ ಒಬ್ರು ಜಮೀನ್ದಾರ್ರು .........

ನಾಣಿ

ಓಹೋ ಜಮೀನ್ದಾರ್ ನರಸಪ್ನೋರಿರೋದೋ! ಸರಿ ಸರಿ, ಅದು ಗಿಡ್ಡರಾಯಾಪುರ.

ಚಂದು

ನರಸಪ್ಪನೋರು ತಮಗೆ ಪರಿಚಿತರೋ?

ನಾಣಿ

ಅಯ್ಯೋ ಅಯ್ಯೋ, ಇದೇನ್ಸ್ವಾಮಿ ಕೇಳ್ತೀರಲ್ಲಾ. ನರಸಪ್ಪನೋರನ್ನ ನಾ ಕಾಣ್ನೇ? ಅವರಿಗೆ ಕೂದಲು ನರೀತಾ ಬಂದಿದೆ. ಅವರ ಮನೇಲಿ, ಅವರು, ಅವರ ಕುಟುಂಬ ಭಾಗಮ್ಮನೋರು, ಒಬ್ಬ ಮಗಳು, ಭಾಗಮ್ಮನೋರ ಅಕ್ಕನ ಮಗಳು, ಭಾಗಮ್ಮನೋರ ತಮ್ಮ—ಇಷ್ಟು ಜನ ಇದಾರೆ. ಹೌದೋ?

ಚಂದು

ನರಸಪ್ಪನೋರನ್ನ ನಾವು ಕಾಣೆವು. ಆದರೆ ಅವರಿಗೆ ನೀವು ಹೇಳೋ ಸಂಸಾರ ಇದೆ ಅಂತ ಕೇಳಿ ಬಲ್ಲೆವು. ಅದೇ ನರಸಪ್ಪನೋರು. ಅವರ ಮನೆಗೇ ನಾವು ಹೋಗಬೇಕಾಗಿರೋದು.

ನಾಣಿ

ಅವರ ಮಗಳು ಜಯಮ್ಮ ಅಂತ — ಅಂಥ ಜಾಣೆಯೇನೂ

ಅಲ್ಲಾನ್ನಿ. ಆದರೆ ಅವರ ಹೆಂಡತಿ ತಮ್ಮ, ನಾಣಿ ಅಂತ ಇದಾನೆ ಸ್ವಾಮಿ— ಚಿನ್ನ, ಚಿನ್ನದಂಥ ಹುಡುಗ!

### ರಮೇಶ್

ನಾವು ಕೇಳಿದ್ದೇವು: ಮಗಳೇ ಜಾಣೆ, ಆ ನಾಣೀಂದೇ ಅತಿಕ್ಷೇಂಲಿ ಬೆಳೆದಿದಾನೆ ಅಂತ.

### ನಾಣಿ

ಹುಂ? ಹಾಗೇನು ಸ್ವಾಮೀ? ....ಈ ರಾತ್ರಿ ನೀವು ನರಸಪ್ಪ ನೋರನ್ನ ತಲುಪಲಾರಿರಿ.

### ರಮೇಶ್

ದುರದೃಷ್ಟವೇ!

### ನಾಣಿ

ನೀವು ಎಲ್ಲಿಗೋ ಬಂದುಬಿಟ್ಟಿದ್ದೀರಿ. ಗಿಡ್ಡರಾಯಾಪುರವೆಲ್ಲಿ, ನೀವೆಲ್ಲಿ? ಎಷ್ಟು ದೂರ ಆಯಿತು! ರಾತ್ರೀ ಹೊತ್ತು ಪ್ರಯಾಣ ಮಾಡೋ ದಾರೀನೇ! ಅರಣ್ಯದಲ್ಲಿ ಹೋಗಬೇಕು. ಮೋಡ ಬೇರೇ ಕವಿದಿದೆ. ಗಾಡಿ ಮುಗುಚಿಕೊಂಡರೂ ಆಯಿತು, ಯಾರ ಕೈಗಾದರೂ ಸಿಕ್ಕು ಬಿದ್ದರೂ ಆಯಿತು. ಹೌದೋ ಅಲ್ವೋ, ನೀವೇ ಯೋಚನೆ ಮಾಡಿ.

### ಚಂದು

ಹಾಗಾದ ಮೇಲೆ ಯೋಚನೆ ಮಾಡಬೇಕಾದ ಭಾಗವೇ!

### ನಾಣಿ

ನೀವು ಆ ಗುಡ್ಡದ ಹಿಂದೆ ಬಂದಾಗಲೇ ಎಡಕ್ಕೆ ತಿರುಗಿ ನಾಲ್ಕು ದಾರಿಗಳ ಚೌಕದವರೆಗೆ ನೇರವಾಗಿ ಹೋಗಬೇಕಾಗಿತ್ತು.

**ಚಂದು**

ಓಹೋ.

**ನಾಣಿ**

ಆಮೇಲೆ ಆ ನಾಲ್ಕು ದಾರಿಗಳ ಪೈಕಿ ಒಂದನ್ನು ಹಿಡಿದು ಸ್ವಲ್ಪ ದೂರ ಹೋಗಿ, ಬಲಕ್ಕೆ ತಿರುಗಿ, ಆಮೇಲೆ ಒಂದೂವರೆ ಮೈಲಿ ಫಾಸಲೆಯಲ್ಲಿ ಮತ್ತೆ ಎಡಕ್ಕೆ ತಿರುಗಿ, ಹತ್ತು ನಿಮಿಷಗಳ ಮೇಲೆ ಭೂತನ ಕಣಿವೆ ಫಾರೆಸ್ಟ್ನಲ್ಲಿ ಮುಂಪರಿದು, .. .....

**ರಮೇಶ್**

ಈಗೇನು ಮಾಡಬೇಕು ಚಂದು? ಈ ರಾತ್ರಿ ಇಂಥಾ ಪ್ರಯಾಣ ಸಾಧ್ಯವೇ?

**ಚಂದು**

ಸಾಧ್ಯವಿಲ್ಲ. [ನಾಣಿಗೆ] ಸ್ವಾಮೀ, ಈ ರಾತ್ರಿ ಗಿಡ್ಡರಾಯಾಪುರಕ್ಹೋಗೋ ಯೋಚನೆ ಕೈಬಿಟ್ಟು, ಈಗ ಸಧ್ಯ ಯಾವುದಾದರೂ ಒಂದು ಊಟದ ಹೋಟೇಲಿಗ್ಹೋಗೋಣಾಂತ ಯೋಚನೆ ಮಾಡಿದ್ದೇವೆ.

**ನಾಣಿ**

ನೀವು ಎಲ್ಲಿಗ್ಹೋಗಬೇಕೂಂತ ಯೋಚನೆ ಮಾಡಿದ್ದೀರೋ ಅಲ್ಲೀಗೇ ಬಂದಿದ್ದೀರಿ.

**ರಮೇಶ್**

ಹಾಗಾದರೆ ಇದೊಂದು ಊಟದ ಹೋಟೇಲೇನು?

**ನಾಣಿ**

ಇನ್ನು ಹ್ಯಾಗೆ ಹೇಳ್ಲೀ ಸ್ವಾಮೀ ನಾನು? ನೀವು ಎಲ್ಲೀಗ್ಹೋಗ

ಬೇಕೂಂತ ಯೋಚನೆ ಮಾಡಿದ್ದೀರೋ ಅಲ್ಲೀಗೇ ಬಂದಿದ್ದೀರೀಂತ ಹೇಳ್ತಾ ಇದೇನೆ.

**ರಮೇಶ್**

ಸರಿ ಸರಿ, ಹಾಗಾದರೆ ಅನುಕೂಲವೇ ಆಯ್ತಲ್ಲ ಚಂದೂ.

**ಚಂದು**

[ನಾಣಿಗೆ] ಈ ಹೋಟೇಲು ಮಾಲೀಕರು ತಾವೇನೋ?

**ನಾಣಿ**

ನಾನು ಹೋಟೇಲು ಮಾಲೀಕನಲ್ಲ ಸ್ವಾಮೀ. ಕೆಲವು ಕಾಲದಿಂದ ಇಲ್ಲೀ ಇದೀನಿ. ಇಷ್ಟರಲ್ಲೀ ಇಲ್ಲಿಂದ ಹೋಗ್ತೀನೀನ್ನಿ. ಮಾಲೀಕರು ಬರ್ತಾರೆ. ತಾವು ವಿಶ್ರಮಿಸಿಕೊಳ್ಳೋಣಾಗ್ಲಿ ನನಗೆ ಸ್ವಲ್ಪ ಕೆಲಸ ಇದೆ. ಹಾಗೆ ಹೊರಗ್ಹೋಗಿಬಿಟ್ಟು ಬರ್ತೇನೆ.

**ಚಂದು**

ಆಗ್ಲಿ ಆಗ್ಲಿ, ತಾವು ಯಾವ ಕೆಲಸಕ್ಕೋಗ್ತಾ ಇದ್ದಿರೋ ಏನೋ ತಮ್ಮನ್ನ ಇಷ್ಟೊತ್ತು ನಿಲ್ಲಿಸಿದ್ಹಾಗಾಯ್ತು.

**ರಮೇಶ್**

ತಮ್ಮ ಉಪಕಾರ ಮರೆಯೋಹಾಗಿಲ್ಲ.

**ನಾಣಿ**

[ತನ್ನಲ್ಲಿ] ಅದೇನೋ ನಿಜ. ಈಗ ನಾವಮಾಡಿರೋದನ್ನ ನೀವು ಎಂದೆಂದಿಗೂ ಮರೆಯೋದಿಲ್ಲ. [ರಮೇಶಗೆ] ಉಪಕಾರವೇನೂ ಇಲ್ಲ ಸ್ವಾಮೀ. ಆದರೆ ಒಂದು ವಿಷಯ. ಆ ಮಾಲೀಕರು ಮಾತ್ನಾಡೋದು ಸ್ವಲ್ಪ ಜಾಸ್ತಿ. ಬಂದೋರಿಗೆಲ್ಲ ಅಳಿಯಂದಿರಿಗೆ ಮಾಡಿ

ದ್ಹಾಗೆ ಉಪಚಾರಾನೇನೋ ಮಾಡಸ್ತಾರೆ. ಈ ಹೊಟೇಲು ಸ್ವಲ್ಪ ಹಳ್ಳಿಗಾಡಿನ ತರಹ. ಪರಿಚಾರಕರಿಲ್ಲದೇ ಇದ್ದರೂ, ಮನೇಪ್ರೇ ಎಲ್ಲಾ ಕೆಲಸಾನೂ ಮಾಡ್ತಾರೆ. ಆದರೆ ಆ ಮಾಲೀಕರಿಗೆ ಏನೋ ಒಂದು ಚಪಲ, ಅಭ್ಯಾಸ—ಬಂದೋರನ್ನೆಲ್ಲ 'ಎಲ್ಲರೂ ಕ್ಷೇಮವೇ?' ಅಂತ ಕೇಳೋದು, ಅಥವಾ 'ನಿಮ್ಮ ಕಡೆ ಮಳೆಬೆಳೆ ಆಗಿದ್ಯೇ?' ಅಂತ ವಿಚಾರಿಸೋದು, ಅಥವಾ 'ಹಿಂದೆ ಅಮಲ್ದಾರ್ ಗುಂಡಪ್ನೋರು ಹಾಗಿದ್ರು, ಹೀಗಿದ್ರು' ಅಂತ ಕಥೆ ಹೇಳೋದು...... ಅಂದರೆ ನಾ ಹೇಳೋದೂ, ಹೆಚ್ಚಿಗೇ ಮಾತಿಗೆ ಅವಕಾಶ ಕೊಡದೆ ಆತನ್ನ ಸ್ವಲ್ಪ ಹಾಗೆ ದೂರ ಇಟ್ಟಿರಿ ಅಂತ, ಅಷ್ಟೆ.

### ರಮೇಶ್

ಆತನಲ್ಲಿ ಅಷ್ಟುಹೆಚ್ಚಿಗೆ ಮಾತನಾಡೋ ಕೆಲಸ ನಮಗೆ ತಾನೆ ಏನಿದೆ? ಸರಿಯಾದ ಊಟ, ನಿದ್ರೆಗೆ ಒಂದು ಕೊಠಡಿ—ಇಷ್ಟಾದರೆ ನಮ್ಮ ಕೆಲಸ ಆಯ್ತು.

### ನಾಣಿ

[ತನ್ನಲ್ಲಿ] ಭಾವಾ, ನನ್ನ ಅಷ್ಟು ತಾತ್ಸಾರವಾಗಿ ಕಾಣ್ತೀಯಲ್ಲಾ; ಈಗ ಅನುಭವಿಸು [ರಮೇಶ್ ಮತ್ತು ಚಂದೂಗೆ] ನನಗಿನ್ನಷ್ಟೆ ಕೊಡ್ತೀರಾ ?

### ರಮೇಶ್ ಮತ್ತು ಚಂದು

ನಮಸ್ಕಾರ.

### ನಾಣಿ

ನಮಸ್ಕಾರ, ನಮಸ್ಕಾರ. [ತನ್ನಲ್ಲಿ] ಈ ನಾಟಕದ ವೇಷದೋರು ಎಲ್ಹೋದ್ರೋ ಏನೋ! ಕೈಗೇ ಸಿಗಲಿಲ್ವಲ್ಲಾ ! ಹೋಗಿ ನೋಡ್ತೀನೆ.

[ ನಿರ್ಗಮ (ಅ) : ನಾಣಿ. ]

ರಮೇಶ್

ಹುಶ್, ಸಧ್ಯ ಇಷ್ಟುಮಟ್ಟಿಗೆ ಒಂದು ವಸತಿ ಸಿಕ್ಕಿತಲ್ಲ. [ ಎಂದು (ಚ) ಕುರ್ಚಿಯಲ್ಲಿ ಕುಳಿತುಕೊಳ್ಳುವನು. ]

ಚಂದು

ಗಾಡೀಲಿರೋ ಸಾಮಾನೂ........ಮಾಲೀಕರು ಬಂದಮೇಲೆ ಇಳಿಸೋದು ಮೇಲಲ್ವೆ? ಅವರು ಯಾವ ಕೊಠಡೀಲಿ ಜಾಗಮಾಡ್ತಾರೋ ಏನೋ.......

ರಮೇಶ್

ಅಷ್ಟೆ, ಅಷ್ಟೆ. ಬಾ ಕೂತುಕೋ.

ಚಂದು

[ (ಟ) ಕುರ್ಚಿಯಲ್ಲಿ ಕುಳಿತು, ಸುತ್ತಲೂ ನೋಡಿ ] ಕಟ್ಟಡ ಒಳ್ಳೇ ವಿಶಾಲವಾಗಿದೆ. ಹಳೇದಾದರೂ ಚೊಕ್ಕಟವಾಗಿಟ್ಟಿದ್ದಾರೆ.

ರಮೇಶ್

ಇದು ಹೊಟೇಲಿಗಾಗಿ ಕಟ್ಟಿಸಿದ ಕಟ್ಟಡದ ಹಾಗೆ ಕಾಣೋದಿಲ್ಲ ಹಿಂದೆ ಯಾರೋ ದೊಡ್ಡಸಂಸಾರಿಗಳು ತಮ್ಮ ವಾಸಕ್ಕಾಗಿ ಕಟ್ಟಿಸಿದ್ದಿರಬೇಕು. ಈಗ ಹೊಟೇಲ್ ಆಗಿಬಿಟ್ಟಿದೆ. ನಾನು ಎಷ್ಟೋ ಕಡೆ ನೋಡಿದ್ದೇನೆ — ದೊಡ್ಡ ದೊಡ್ಡ ಮನೆಗಳು ಕೊನೆಗೆ ಹೀಗೇ ಹೊಟೇಲೋ ಛತ್ರವೋ ಆಗಿ ಮುಕ್ತಾಯವಾಗುತ್ತೆ.

ಚಂದು

ದೇಶ ತಿರುಗಿದವನು ನೀನು. ನಿನಗೆ ಎಲ್ಲಾ ಗೊತ್ತೇ ಇದೆ.......

ಆದರೆ, ರಮೇಶ್, ಇದುವರೆಗೆ ನಿನಗೆ ಮನೆ ವಾಸಕ್ಕಿಂತ ಹೊಟೇಲ್ ವಾಸವೇ ಹೆಚ್ಚು ಅಭ್ಯಾಸವಾಗಿತ್ತಲ್ಲ, ಇನ್ನುಮೇಲೆ ಹೇಗ್ಮಾಡ್ತೀ? ಹೆಂಡ್ತೀನ ಕಟ್ಕೊಂಡು ಒಂದು ಕಡೆ ನಿಲ್ಲಬೇಕಾಗುತ್ತೆ. ಹೊಟೇಲ್ ವಾತಾವರಣಕ್ಕೂ ಮನೆ ವಾತಾವರಣಕ್ಕೂ ಬಹಳ ವ್ಯತ್ಯಾಸ ಇದೆ.

ರಮೇಶ್

ಅದೇನೋ ಸರಿಯೇ. ಆದರೆ ಹೆಂಡತೀ ಎದುರಿಗೆ ಮಾತ್ನಾಡೋದೂ ಅಂದ್ರೆ ನನಗೆ ........ ತುಂಬಾ ನಾಚಿಕೆ ಆಗುತ್ತೆ, ನೀ ಏನಾದ್ರೂ ಹೇಳು.

ಚಂದು

ಅಷ್ಟು ನಾಚಿಕೆ ಆದರೆ ಹೇಗೆ? ನಾಳೆ ಮಾವನ ಮನೇಲಿ ಮಾತಾಡಿಸಬೇಕಾಗುತ್ತೋ ಏನೋ! ಮಾತಾಡಿಸ್ತೀಯೋ ಇಲ್ವೋ?

ರಮೇಶ್

ಮಾತಾಡಿಸಬೇಕು ಅಂತ ಆಸೆ ಆಗುತ್ತೆ. ಆದರೆ ಏನೋ ಹೇಳ್ಳಾರೆ.

ಚಂದು

ಒಂದ್ವೇಳೆ ಅವರೇ ಬಂದು ಮಾತಾಡಿಸಿದರೆ ?

ರಮೇಶ್

ಮಾತಾಡಬೇಕಾಗುತ್ತೆ. ಆದರೂ ಮನಸ್ಸಿನಲ್ಲಿ ಏನೋ ಒಂದು ಥರ........ಹ್ಯಾಗೋ ಮಾತಾಡೋದೂ?

ಚಂದು

ಹೆಂಗಸರ ಎದುರಿಗೆ ಮಾತಾಡೋದೂ, ಒಂದು ಕಲೆ! ............ ನನಗೂ ಬರೋದಿಲ್ಲ.

ರಮೇಶ್

ಆದರೆ ನನಗಿಂತ ಮೇಲು.

ಚಂದು

ಅದು ಹ್ಯಾಗೆ? ನಿನ್ನ ಹಾಗೇ ನನಗೂ ಇನ್ನೂ ಮದುವೆ ಆಗಿಲ್ಲ.

ರಮೇಶ್

ಆದರೂ ಚಿಕ್ಕಂದಿನಿಂದ ನಿನಗೆ ಶಾಲೇಲಿ ಬಾಲಕಿಯರ ಜೊತೆ ಇತ್ತು. ಆದ್ದರಿಂದ ನಿನಗೆ ಅಷ್ಟು ನಾಚಿಕೆ ಆಗೋದಿಲ್ಲ........ ಎಷ್ಟೋ ಸಲ ನೀನೇ ಹೇಳಿದ್ದೀ ನನಗೆ— ನಳಿನಿ ಅಂತ, ಜೊತೇಲಿ ಓತ್ತಾ ಇದ್ಲು, ಹಾಗೆ, ಹೀಗೆ, ಅಂತ! ........ ಹೆಂಗಸರ ಬಳಿ ಮಾತಾಡೋದರ ಗುಟ್ಟು ಏನು ಹೇಳು. ನಾಳೆ ರಾಯಾಪುರ ಸೇರೋ ವೇಳೆಗೆ ಕಲಿತಿರೋಣ.

ಚಂದು

ಹೇಳೋದು ಕಷ್ಟ........ನೋಡೂ, ಸಂಭಾಷಣೇಲಿ ಒಂದು ಥರ ಧಾರಾಳ, ಸರಳತೆ, ಒಂದು ವಿಧವಾದ ಮಾಧುರ್ಯ, ಒಂದು ನಮೂನೆ ಭರವಸೆ—ಎಲ್ಲಾ ಸರಿಯಾದ ಪ್ರಮಾಣದಲ್ಲಿ ಮಿಶ್ರವಾಗಿ ರಬೇಕು. ಇಲ್ದೇ ಇದ್ರೆ ಜವಾಬ್ ಬರೋದಿಲ್ಲ..... ... [(ಅ) ಕಡೆ ನೋಡಿ] ........ ಆಗೋ ಹೋಟೇಲ್ ಮಾಲೀಕರು ಬಂದ್ರೂಂತ ಕಾಣುತ್ತೆ........ಆಮೇಲೆ ಹೇಳ್ತೀನಿ.

**[ಪ್ರವೇಶ (ಅ) : ನರಸಪ್ಪ.]**

[ನರಸಪ್ಪ ಹಣ್ಣಿನ ಬುಟ್ಟಿ ಸಮೇತ ಪ್ರವೇಶಿಸಿ, ಅವರನ್ನು ನೋಡಿ ಹಿಗ್ಗುತ್ತ]

ನರಸಪ್ಪ

ನಮಸ್ಕಾರ, ನಮಸ್ಕಾರ, ತಾವುಗಳು ದಯಮಾಡಿಸಿದ್ದು ಭಾಳಾ

ಸಂತ್ರೋಷ........ [ಎಂದು ಹಣ್ಣಿನ ಬುಟ್ಟಿಯನ್ನು ಒಳಬಾಗಿಲಿನಲ್ಲಿಟ್ಟು ಬಂದು—(ಕ) ಕುರ್ಚಿಯ ಬಳಿ ನಿಂತು] ತುಂಬಾ ಮಾರ್ಗಾಯಾಸಾಂತ ಕಾಣ್ಸುತ್ತೆ........ರಮೇಶರಾಯರು ಬಂದಿರೋದು ನನ್ನ ಮನಸ್ಸಿಗೆ ಎಷ್ಟೋ ಹರುಷವಾಗಿದೆ.........

ರಮೇಶ್

ಮೊದಲು ಆ ಗಾಡೀಲಿರೋ ಸಾಮಾನು ಇಳಿಸೋದಕ್ಕೆ ಒಂದು ಕೊಠಡೀ ಆಗಬೇಕು........ಆ ಕುದುರೇಗೆ ಒಂದಿಷ್ಟು ಹುರುಳಿ....

ನರಸಪ್ಪ

[ಪೆಚ್ಚಾಗಿ]........ ಊಂ, ಅದನ್ನೆಲ್ಲಾ ನಾನ್ನೋಡ್ಕೋತೀನಿ,........ ಆಗ್ಲೇ ಗಾಡೀವನಿಗ್ಹೇಳಿದೀನಿ; ಸಾಮಾನಿಳಿಸ್ತಾ ಇದಾನೆ........ ಹುರುಳೀಗೂ ಹೇಳಿಬರ್ತೀನಿ........

[ನಿರ್ಗಮ (ಅ) : ನರಸಪ್ಪ.]

ಚಂದು

ರಮೇಶರಾಯರು ಅಂತ ಅಂದನಲ್ಲ, ನಿನ್ನ ಹೆಸರು ಹ್ಯಾಗೆ ಗೊತ್ತಾಯ್ತು ಈತನಿಗೇ?

ರಮೇಶ್

ಬರ್ತಾ ನಮ್ಮ ಗಾಡೀವನಿಂದ ಕೇಳಿ ತಿಳಕೊಂಡು ಬಂದಿದಾನೆ!

ಚಂದು

ಹೌದು, ಹೌದು. ಅಷ್ಟು ಜಾಣತನ ಇಲ್ದೇ ಇದ್ರೆ ಇಷ್ಟು ದೊಡ್ಡ ಹೊಟೇಲ್ ನಡಸ್ತಾ ಇದ್ನೇ ಈ ಹಳ್ಳಿಗಾಡಿನಲ್ಲಿ!

ರಮೇಶ್

ಅಲ್ಲದೇ ಆತ ಆಗಲೇ ಹೇಳ್ಳಿಲ್ವೇ, ಈತ ಸ್ವಲ್ಪ ಅಧಿಕಪ್ರಸಂಗಿ ಅಂತ?

*

ಚಂದು

ಹೌದು ಹೌದು........ಅಗೋ ಬಂದರು........

[ಪ್ರವೇಶ (ಅ) : ನರಸಪ್ಪ.]

ನರಸಪ್ಪ

ಎಲ್ಲಾದಕ್ಕೂ ವ್ಯವಸ್ಥೆ ಮಾಡಿ ಬಂದಿದೀನಿ. ತಾವೇನೂ ಯೋಚನೆ ಹಚ್ಚಿಕೋಬೇಡಿ........ [(ಶ) ಕುರ್ಚಿಯಲ್ಲಿ ಕುಳಿತು] ಊರು ಕಡೆ ಎಲ್ಲಾ ಕ್ಷೇಮವೇ?........ಮಳೆ, ಬೆಳೆ........

ರಮೇಶ್

[ಚಂದೂಗೆ ಮೆಲ್ಲನೆ] ಷುರು ಆಯ್ತು ಮಳೆ! [ನರಸಪ್ಪನಿಗೆ] ಈ ಕೋಟು ಹಾಕೋದಕ್ಕೆ ಒಂದು ಮೊಳೆ........ಎಲ್ಲಿದೆ? [ಎಂದು ಸುತ್ತಲೂ ನೋಡುತ್ತ ಕೋಟ್ ಬಿಚ್ಚುವನು.]

ನರಸಪ್ಪ

ಇಗೋ ಇಲ್ಲಿ ನಿಲುವಿದೆ.

ರಮೇಶ್

ಅನುಕೂಲವೇ ಆಯ್ತು.

[ರಮೇಶ್ ಮತ್ತು ಚಂದು ಕೋಟುಗಳನ್ನು ನಿಲುವಿಗೆ ಹಾಕುತ್ತಿರುವರು.]

ನರಸಪ್ಪ

[(ಯ) ಎಂಬಲ್ಲಿಗೆ ಬಂದು, ತನ್ನಲ್ಲಿ] ಇವರು ಯಾಕೋ ಸರಿಯಾಗಿ ಮಾತೇ ಆಡೋದಿಲ್ವಲ್ಲಾ! ...........ಏನಾದರೂ ಒಂದು ಸುದ್ದಿ ತೆಗೀತೀನಿ.

[ಮತ್ತೆ ಎಲ್ಲರೂ ಹಿಂದಿನಂತೆ ಕುಳಿತುಕೊಳ್ಳುವರು.]

ನಿಮ್ಮ ಕುದುರೆಗಾಡಿ ನೋಡಿದರೇ, ಒಂದೆ ಈ ತಾಲ್ಲೂಕಿನಲ್ಲಿದ್ದ ಅಮಲ್ದಾರ್ ಗುಂಡಪ್ಪನೋರ ಕುದುರೇ ಗಾಡಿ ಜ್ಞಾಪಕಕ್ಕೆ ಬರುತ್ತೆ ನೋಡಿ! ಅವರ ದವಲತ್ತಿನಲ್ಲೀ........

### ರಮೇಶ್

ಯಜಮಾನ್ರೆ ಮೊದಲು ಒಂದು ಸ್ವಲ್ಪ ಟೀ ತರಿಸಿದರೆ ಚನ್ನಾಗಿ ರುತ್ತಲ್ವೆ, ಅಮಲ್ದಾರ್ ಗುಂಡಪ್ಪನೋರ ದವಲತ್ತಿನ ವಿಷ್ಯ ಕೇಳೋ ದಕ್ಕೆ ?

### ಚಂದು

ಹೌದು ಸ್ವಾಮಿ. ಬಹಳ ದಣಿಕೊಂಡು ಬಂದಿದೇವೆ. ಮೊದಲು ಒಂದು ಸ್ವಲ್ಪ ಟೀ ಆದರೆ, ಆಮೇಲೆ ಅಡಿಗೆ ಆಗೋತನಕ ಕೂತು ಕೊಂಡು ಮಾತಾಡಬಹುದು.

### ನರಸಪ್ಪ

[ಪೆಚ್ಚಾಗಿ] ಆಗಬಹುದು.... ತಾವು ಇಷ್ಟುಹೊಟ್ಟಿಗೆ ನಿಸಂಕೋಚ ವಾಗಿರಬೇಕೂನ್ನೋದೇ ನನ್ನ ಆಶಯ. [ಕಾಫಿ ಕೆಟ್ಲ್ ಮತ್ತು ಮೂರು ಲೋಟಾಗಳನ್ನು ತಂದು ಮೇಜಿನ ಮೇಲಿಡಲು ಓಡಾಡುತ್ತಿರುವನು. ರಮೇಶ್ ಮತ್ತು ಚಂದು ಕಿರುನಗೆಯಿಂದ ಪರಸ್ಪರ ಮುಖಗಳನ್ನು ನೋಡಿಕೊಳ್ಳುತ್ತಿ ರುವರು.]

### ರಮೇಶ್

[ಚಂದೂಗೆ ಮೆಲ್ಲಗೆ] ಸಂಕೋಚವಂತೆ ಸಂಕೋಚ! ಹೊಟೇಲಿನ ಲ್ಲಿಂಥಾದ್ದೋ ಸಂಕೋಚಾ? ನಾಳೆ ಮಾವನ ಮನೇಲಾದ್ರೆ ಸಂಕೋಚಪಡೋದು ನ್ಯಾಯ.

### ಚಂದು

[ಮೆಲ್ಲನೆ] ಈತ ಹೊಟೇಲ್ ಮಾವ ಕಾಣೋ.

**ರಮೇಶ್**

[ಮೆಲ್ಲನೆ] ಸುಮ್ನಿರು, ಕೇಳ್ತೀಂತ್ರು.

**ನರಸಪ್ಪ**

ತಕೊಳ್ಳೋಣಾಗ್ಲಿ [ಎಂದು ಕಾಫಿಯನ್ನು ಲೋಟಾಗಳಿಗೆ ಬಗ್ಗಿಸುವನು.]

**ರಮೇಶ್**

ನನಗೆ ಅಪರ ತುಂಬ ಹಾಕಿಬಿಡಿ ಸ್ವಾಮಿ. [ನರಸಪ್ಪ ಬೆಚ್ಚುವನು. ಕಾಫಿ ಸ್ವಲ್ಪ ಚೆಲ್ಲುವುದು.]

**ಚಂದು**

[ನರಸಪ್ಪನಿಗೆ] ಓಹೋ ತಮಗೂ ಟೀ ಅಭ್ಯಾಸವೋ ಇಷ್ಟೊತ್ತಿನಲ್ಲೀ?

**ರಮೇಶ್**

[ಕಾಫಿ ಸವಿದು] ಇದು ಟೀ ಅಲ್ಲ, ಕಾಫಿ !

**ನರಸಪ್ಪ**

ತಮಗೆ ಟೀನೇ ಆಗಿದ್ರೆ ಚನ್ನಾಗಿತ್ತೀಂತ್ಸೋ... .

**ರಮೇಶ್**

ಚಿಂತೆಯಿಲ್ಲ. ಕಾಫೀನೇ ಇರಲಿ. ... ಸ್ವಲ್ಪ ಸಕ್ರೆ ತರಿಸೋಣಾಗ್ಲಿ ..... .....ತುಂಬಾ ಬಿಸಿ, ಇನ್ನೊಂದು ಖಾಲೀ ಲೋಟಾ ಬೇಕು.

**ನರಸಪ್ಪ**

[ಸಕ್ಕರೆ ಮತ್ತು ಖಾಲೀ ಲೋಟಾ ತಂದಿಟ್ಟು] ಕಾಫಿ ಆರೋವರೆಗೆ ಇದನ್ನ ಸ್ವಲ್ಪ ತಕೊಳ್ಳೋಣಾಗ್ಲಿ [ಎಂದು ಒಂದು ತಟ್ಟೆಯ ತುಂಬ ಚಕ್ಕುಲಿ, ಕೋಡಬಳೆ, ಮಯ್ಸೋರೆ ಪಗ್ಯೆರೆ ಮತ್ತು ನೀರಿನ ಪಾತ್ರೆ ತಂದಿಡುವನು.]

ರಮೇಶ್

ಓಹೋ, ಇದೂ ಒಳ್ಳೇದೇ ಆಯ್ತು.........ಕೂತುಕೊಳ್ಳೋಣಾಗ್ಲಿ ....... ಅಮಲ್ದಾರ್ ಗುಂಡಪ್ಪನೋರ ದವಲತ್ತಿನಲ್ಲಿ........ ಏನೋ ಹೇಳ್ತಾ ಇದ್ದಿರಲ್ಲಾ ........[ರಮೇಶ್ ಮತ್ತು ಚಂದು ತಿಂಡಿ ತೆಗೆದು ಕೊಳ್ಳುವರು.]

ಚಂದು

ಈಗ ಹೇಳಿ ಸ್ವಾಮಿ ಗುಂಡಪ್ಪನೋರ ಕುದುರೇ ಗಾಡೀ ವಿಚಾರ.

ನರಸಪ್ಪ

[ಸಂತೋಷದಿಂದ] ಆ ವಿಚಾರವೋ ?........ಬಹಳ ವರ್ಷಗಳ ಹಿಂದಿನ ಮಾತು........ಒಂದು ದಿವ್ಸ ಹೀಗೇ ರಾತ್ರೀ ಹೊತ್ತು ಕುದುರೇ ಗಾಡೀಲಿ ಪ್ರಯಾಣ ಮಾಡ್ತಾ ಇದ್ದರು, ಅಮಲ್ದಾರ್ ಗುಂಡಪ್ಪ ನೋರು. ಆಗ, 'ಅರ್ಧದಾರೀಲಿ ಕಳ್ಳರು ಬಂದು ಕುದುರೇ ಹಿಡಿದು ನಿಲ್ಲಿಸಿಬಿಟ್ರು! ಗಾಡೀಲಿ ಎರಡು ಸಾವಿರ ರೂಪಾಯಿ ಕಂದಾಯದ ಹಣ. ಗುಂಡಪ್ಪನೋರು, ಗಾಡೀವಸು ಇಬ್ಬರೇ. ಏನು ಮಾಡ ಬೇಕು ?

ಚಂದು

ಜೊತೆಗೆ ಜವಾನ್ರು ಗಿವಾನ್ರು ಯಾರನ್ನೂ ಕರಕೊಂಡ್ಹೋಗಿರ ಲಿಲ್ವೋ ?

ನರಸಪ್ಪ

ಯಾರೂ ಇಲ್ಲ. ಅವರಿಬ್ಬರೇ.

ರಮೇಶ್

ಕಳ್ಳರೆಷ್ಟು ಜನ ಬಂದಿದ್ರೋ ಏನೋ! ........ ಒಳ್ಳೇ ಕಷ್ಟಕ್ಕೇ ಇಟ್ಕೊಕೊಂಕಲ್ಲ ಸ್ವಾಮಿ ಗುಂಡಪ್ಪನೋರಿಗೇ! [ಎಂದು ಕಾಫಿ ಲೋಟ ತೆಗೆದುಕೊಳ್ಳುವನು.]

ನರಸಪ್ಪ

ಇನ್ನು ಸ್ವಲ್ಪ ತಕೊಳ್ಳೋಳಾಗ್ಲಿ ಚಕ್ಲೀ.

ಚಂದು

ತಕೋ ರಮೇಶ್. ಈ ಮುಚ್ಚೋರೆ ತಕೋ. ಚಕ್ಲೀಗಿಂತ ಚನ್ನಾಗಿದೆ.

ರಮೇಶ್

ಆ ಚಕ್ಲಿ ಯಾಕೋ ನನಗೆ ಹಿಡಿಸ್ಲಿಲ್ಲ........ಊಂ, ಈ ಮುಚ್ಚೋರೆ ಚನ್ನಾಗಿದೆ.

ನರಸಪ್ಪ

[(ಯ) ಎಂಬಲ್ಲಿಗೆ ಬಂದು, ತನ್ನಲ್ಲಿ] ಇವರು ಯಾಕೋ ಒಂದು ನಮೂನೆಯಾಗಿ ಮಾತ್ನಾಡ್ತಾ ಇದಾರಲ್ಲಾ!........ ಹೀಗೆಲ್ಲಾದರೂ ಉಂಟೆ?

ಚಂದು

ಬನ್ನಿ ಯಜಮಾನ್ರೇ, ಹೇಳಿ ಬನ್ನಿ........ಕಳ್ಳರು ಹೊಡಕೊಂಡ್ಹೋದ್ರೋ ಕಂದಾಯದ ಹಣ ಎಲ್ಲಾ? [ಎಲ್ಲರೂ ಕಾಫಿ ತೆಗೆದುಕೊಳ್ಳುವರು.]

ನರಸಪ್ಪ

[ಕುಳಿತು] ಅದೇ ಹೇಳ್ತಾ ಇದ್ದೆನಲ್ಲ. ಅರ್ಧರಾತ್ರಿ. ಅರಣ್ಯ. ಕುದುರೆಗಾಡಿ ಮುಂದುಗಡೆ ಕಳ್ಳರು ಕುದುರೆ ಹಿಡಿದು ನಿಲ್ಲಿಸಿಬಿಟ್ಟಿದಾರೆ. ಗಾಡೀವನು ಭಯಪಟ್ಟುಕೊಂಡು ಕೂತಿದಾನೆ. ಗಾಡೀಲಿ ಹಿಂದುಗಡೆ ಅಮಲ್ದಾರ್ ಗುಂಡಪ್ನೋರು ಕೂತಿದಾರೆ. ಗುಂಡಪ್ನೋರಿಗೂ ಗಾಡೀವನಿಗೂ ಮಧ್ಯೆ ಎರಡು ಸಾವಿರ ರೂಪಾಯಿ ಕಂದಾಯದ ಹಣದ ಗಂಟು ಇದೆ! ಆ ಸಮಯದಲ್ಲಿ........ಗುಂಡ

ಪ್ನೋರು ಎಷ್ಟೇ ಆಗ್ಲಿ, ಬುದ್ಧಿವಂತರು...........ಕಳ್ಳರಿಗೆ ಕೂಗಿ ಹೇಳಿದರು: "ಅಯ್ಯಾ, ಈ ಹಣ ತಕೊಳ್ಳಿ, ಪ್ರಾಣ ಉಳಿಸಿ" ಅಂತ!

ಚಂದು

ಆಹಹಹ! ನೋಡಿದ್ರಾ ಗುಂಡಪ್ನೋರ ಬುದ್ಧೀ!

ನರಸಪ್ಪ

ಆಗ ಕುಳ್ಳರು ಕುದುರೇ ಕೈಬಿಟ್ಟು, ...........

ರಮೇಶ್

'ಕಳ್ಳರು' ಅನ್ನೀ ಸ್ವಾಮೀ, ...........

ಚಂದು

'ಕುಳ್ಳರು' ಅಂತೀರಲ್ಲ.

ನರಸಪ್ಪ

ಕಳ್ಳರು, ಕಳ್ಳರು, ಹಣಕ್ಕಾಗಿ ಗಾಡೀ ಹಿಂದಕ್ಕೆ ಬರೋದರೊಳಗಾಗೀ .... .....

ರಮೇಶ್

ಗಾಡೀವನು ಕುದುರೆ ಓಡಿಸಿದ. ಕಳ್ಳರಿಗೇನೂ ಸಿಕ್ಲಿಲ್ಲ. ಇಷ್ಟೇ ತಾನೇ ನಿಮ್ಮ ಕುಳ್ಳರ ಕಥೆ?

ನರಸಪ್ಪ

ನಿಜವಾಗಿ ನಡೆದ ಸಂಗತಿ ಇದು. ಮಿಂಚಿನ ವೇಗದಿಂದ ಓಡೋ ಕುದುರೇ, ...........

ಚಂದು

ಮತ್ತು ಮಿಂಚಿನ ವೇಗದಿಂದ ಓಡೋ ಬುದ್ಧೀ,...........

**ರಮೇಶ್**

ಎರಡೂ ಇದ್ದದ್ದರಿಂದ ಕಂದಾಯದ ಹಣ ಉಳೀತು. ಹೌದೋ ಅಲ್ವೋ ?...... ಇನ್ನು ಅಡಿಗೇಗೇನೇನಾಗಬೇಕೋ ನೋಡೋಣಾಗ್ಲಿ ಯಜಮಾನ್ರೇ.

**ನರಸಪ್ಪ**

[(ಯ) ಎಂಬಲ್ಲಿಗೆ ಬಂದು, ತನ್ನಲ್ಲಿ ] ಇದೇನು ವಿಚಿತ್ರ ಇವರ ಮಾತು! 'ತುಂಬಾ ನಾಚಿಕೆ, ನಯ, ಭಯ' ಅಂತ ಅಂದರು ಪುರೋಹಿತರು?

**ಚಂದು**

ಅಡಿಗೆ ಇನ್ನೂ ತಡವಾದರೂ ಚಿಂತೆಯಿಲ್ಲ ಯಜಮಾನ್ರೇ, ಏನೂ ಯೋಚನೆ ಮಾಡಬೇಡಿ. ನಿಧಾನವಾಗಾಗ್ಲಿ.

**ನರಸಪ್ಪ**

ಇಲ್ಲ ಇಲ್ಲ. ಅಡಿಗೆ ಆಗ್ತಾ ಬಂತು. ತಾವು ಸಂಧ್ಯಾವಂದನೆಗೆ ಏಳೋಣಾಗ್ಲಿ.

**ರಮೇಶ್**

ಸಂಧ್ಯಾವಂದನೆ ಎಷ್ಟೊತ್ತು, ಸ್ವಲ್ಪದರಲ್ಲೇ ಮುಗಿಸಿಬಿಡ್ತೇವೆ. ಆದರೆ ಊಟಕ್ಕೆ ತೊವೆ, ಮಜ್ಜಿಗೇಹುಳಿ, ಪಲ್ಯ ವಗೈರೆ ಮಾಡಿಸಿದರೆ ಮೇಲು. ದಣಿದು ಬಂದಿದೇವೆ.

**ನರಸಪ್ಪ**

ಏನೇನೋ ಮಾಡಿದಾರೆ. ಏಳೋಣಾಗ್ಲಿ. [ ಒಳಕ್ಕೆ ಹೋಗುತ್ತ ತನ್ನಲ್ಲಿ] ಅಡಿಗೆ ವಿವರ ಕೇಳೋದಕ್ಕೆ ಪ್ರಾರಂಭಮಾಡಿಬಿಟ್ನಲ್ಲಾ ! ಈಗ ಭಾಳಾ ಚನ್ನಾಯ್ತು !

**[ ನಿರ್ಗಮ (ಅ) : ನರಸಪ್ಪ.]**

**ರಮೇಶ್**

ಊಟ ಮುಗಿಸಿಕೊಂಡು ಬಂದೂ, ಜಾಗ್ರತೆ ಮಲಗೋ ಯೋಚನೆ ಮಾಡೋಣಾ ಬಾ ಚಂದೂ.

**ಚಂದು**

ಚನ್ನಾಗಿ ನಿದ್ರೆಮಾಡಬೇಕು. ನಾಳೆ ಬೆಳಗ್ಗೆ ಪ್ರಯಾಣ ಬೇರೇಇದೆ.

**[ನಿರ್ಗಮ (ಆ) : ರಮೇಶ್ ಮತ್ತು ಚಂದು.]**

**[ಪ್ರವೇಶ (ಅ) : ನಾಣಿ.]**

[ರಮೇಶ್ ಮತ್ತು ಚಂದು ಒಳಕ್ಕೆ ಹೋಗುತ್ತಿರುವಾಗ ಹೊರಬಾಗಿಲಿನಿಂದ ನಾಣಿ, ಒಂದು ರಬ್ಬರಿನ ಬಣ್ಣದ ಗುಳೂಪವನ್ನು ದಪ್ಪವಾಗಿ ಊದುತ್ತ, ಪ್ರವೇಶಿಸುವನು. ಆಮೇಲೆ (ಚ) ಕುರ್ಚಿಯಲ್ಲಿ ಕುಳಿತು, ಗುಳೂಪವನ್ನು ಚಿಕ್ಕದು ಮಾಡಿ, ಜೇಬಿನಲ್ಲಿರಿಸಿ, ಮೆಲ್ಲನೆ (ಆ) ಬಾಗಿಲಿನ ವರೆಗೆ ಹೋಗಿ, ಉಂಗುಷ್ಠದ ಮೇಲೆ ನಿಂತು ಒಳಕ್ಕೆ ನೋಡಿ, (ಯ) ಎಂಬಲ್ಲಿಗೆ ಬಂದು]

**ನಾಣಿ**

ಎಲ್ರೂ ಆಗ್಩ೇ ನನ್ನ ಬಿಟ್ಟೇ ಊಟಕ್ಕೂತುಕೊಂಡುಬಿಟ್ಟಿದಾರೇ ! ........ಹುಂ, ನನಗ್ಯಾರು ಕಾಯ್ತಾರೆ, ಈ ಮನೇಲಿ?............ ಹೋಗ್ಲಿ, ಅಳಿಯಂದಿರ ಸಮಾಚಾರ ಏನೇನಾಯ್ತೋ ಗೊತ್ತಾಗ್ಲಿಲ್ವಲ್ಲಾ.

**[ಪ್ರವೇಶ (ಆ) : ನಳಿನಿ.]**

[ಕಸೂತಿ ಚೌಕವನ್ನು ತಂದು ನಳಿನಿ ಮೇಜಿನ ಮೇಲೆ ಹಾಸುತ್ತಿರುವಳು.]
ನಳಿನೀ, ಬಾ ಇಲ್ಲಿ [ಬರುವಳು] .....ಅಳಿಯನ್ನ ಒಪ್ಪಿದ್ನೋ ಭಾವಾ?

**ನಳಿನಿ**

ಏನೋ ಗೊತ್ತಿಲ್ಲ.........ಸ್ವಲ್ಪ ಅಸಮಾಧಾನ ಇದ್ದಾಗಿದೆ.

ನಾಣಿ

ಹುಂ........ಅಸಮಾಧಾನ ಯಾಕೆ? ಮಾತು, ಕಥೆ, ಉಪಚಾರ ಎಲ್ಲಾ ಸರಿಯಾಗಿ ನಡೀತಾ ಇದೇ ತಾನೇ?

ನಳಿನಿ

ಉಪಚಾರವೇನೋ ನಡೀತಾ ಇದೆ. ಆದರೆ "ಅಳಿಯ ಮಾತಾಡೋ ರೀತಿ ಸರಿಯಾಗಿಲ್ಲ, ಹಾಗೆ, ಹೀಗೆ" ಅಂತ ಗೊಣಗುತಾ ಇದ್ದರು ಚಿಕ್ಕಮ್ಮನ ಮುಂದೆ.

ನಾಣಿ

ಸರಿ, ಈ ಭಾವನ ಒಣಜಂಭ ನಾ ಕಾಣೆನೇ? ಮಾತಾಡೋದೇ ಒಂದಪರಾಧ ಈತನ ಮುಂದೆ.

ನಳಿನಿ

ಆದರೂ ಮಾತು ಸ್ವಲ್ಪ ಜಾಸ್ತೀನೇ ನಾಣಿ. ನಾನೂ ಈ ಬಾಗಿಲಲ್ಲಿ ಸ್ವಲ್ಪ ಸ್ವಲ್ಪ ಕೇಳಿಸಿಕೊಂಡೆ.

ನಾಣಿ

ಜಾಸ್ತಿ ಅಂದರೆ?

ನಳಿನಿ

ಪ್ರಾರಂಭಕ್ಕೇ ಗಾಡೀಯಿಂದ ಸಾಮಾನು ಇಳಿಸು, ಕುದುರೇಗೆ ಹುರುಳಿ ಆಗಬೇಕು, ಟೀ ತಕೊಂಡು ಬಾ—ಹೀಗೆಲ್ಲಾ ಧೋರಣೆ.

ನಾಣಿ

ಕುದುರೇಗೆ ಹುರುಳಿ ಹಾಕೋದರಲ್ಲಿ ತಪ್ಪೇನಿದೆ? ಹುರುಳಿ ಹಾಕದೆ ಇದ್ದರೆ ಅದು ಸತ್ಹೋಗೊಲ್ವೇ?

ನಳಿನಿ

ಊಂ, ಸತ್ಹೋಗುತ್ತೆ, ಬಾ ಅಂತ.

**ನಾಣಿ**

ನಿನಗೆ ಒಂದು ಹೊತ್ತು ಊಟ ಹಾಕದೇ ಇದ್ದರೆ ಬಾಯಿ ಬಾಯಿ ಬಿಡ್ತೀ. ಕುದುರೆ ಯಾಕೆ ಸಾಯಬಾರದು?.. ಆಮೇಲೇನಾಯ್ತು ಹೇಳು, ಹೋಗ್ಲಿ.

**ನಳಿನಿ**

ಆಮೇಲೆ ನನಗೆ ಹಸಿವಾಗುತ್ತೆ, ಒಳ್ಳೇ ಊಟ ಹಾಕಿಸಿ ಅಂತ ಕೇಳ್ಕೋದೇ?

**ನಾಣಿ**

ಸರಿ, ಈ ಭಾವನ ದರ್ಬಾರಿನಲ್ಲಿ ಕುದುರೆಗಳಿಗೆ, ಮನುಷ್ಯರಿಗೆ, ಯಾರಿಗೂ ಹಸಿವಾಗಬಾರದು! ಎಲ್ಲಾ ಇಂಥಾದ್ದೇ ತಾನೇ ನಡೆದಿರೋದೂ? ..ಅಲ್ಲಿ ನೋಡಿ, ನನ್ನ ಬಿಟ್ಟೇ ಊಟಕ್ಕೆ ಕೂತಿದಾರಲ್ಲ, ನೋಡಿದ್ಯಾ ಹ್ಯಾಗಿದೇ?

**ನಳಿನಿ**

ಓಹೋಹೋ! ಮಹಾ ದೊಡ್ಡ ಮನುಷ್ಯ ಅಂತ ಕಾಯ್ಬೇಕೇನೋ ನಿನಗೆ! ಊಟದ ಹೊತ್ತಿಗೆ ನೀನು ಮನೇಲಿದ್ರೆ ತಾನೆ ಎಂದಾದ್ರೂ?

**ನಾಣಿ**

[ತನ್ನಲ್ಲಿ] ಅಬ್ಬ! ಎಷ್ಟು ತಾತ್ಸಾರ ಇವಳಿಗೆ ನನ್ನಮೇಲೆ! ಈ ಜಂಭದ ಕೋಳೀನ ನಾನು ಮದುವೇ ಬೇರೇ ಮಾಡಿಕೋಬೇಕಂತೆ! [ನಳಿನಿಗೆ] ನಿನ್ನ ಕೆಲಸ ಏನಿದ್ಯೋ ನೋಡಿಕೊ ಹೋಗು.

[ನಿರ್ಗಮ (ಅ) : ನಳಿನಿ.]

ಹುಂ! ಹಾಗಾದ್ಮೇಲೆ ನಾ ಹಾಕಿದ ಬೀಜ ಮೊಳಕೆ ಹೊರಟು

ಕೊಂಡಿದೇಂತ ಆಯ್ತು. ಬೇಕೇಲಿ, ಬೇಕೇಲಿ. ಈಗ ನಾನಿಲ್ಲಿರ ಬಾರದು. ಎಲ್ಲ್ರೂ ಮಲಗಿ ನಿದ್ರೆ ಹೋಗ್ಲಿ. ಆ ವೇಳೆಗೆ ನಾಟಕದ ಪ್ರಾಕ್ಟೀಸು ಮುಗಿಸಿಕೊಂಡು ಬರೋಣ.

**[ಪ್ರವೇಶ (ಆ) : ಜಯು.]**

[ಜಯು ತಾಂಬೂಲದ ತಟ್ಟೆಯನ್ನು ಹಿಡಿದು ಪ್ರವೇಶಿಸುವಳು]

**ನಾಣಿ**

[ಹಿಂದಿನಿಂದ ಹೋಗಿ, ಗಟ್ಟಿಯಾಗಿ] ಅಹ್ಹಾಂ! [ಎಂದು ಹೆದರಿಸುವನು. ಜಯು ಹೆದರಿ ತಟ್ಟೆಯನ್ನು ಕೈಬಿಡುವಳು] ತಟ್ಟೆ ಸರಿಯಾಗಿ ಹಿಡಿದು ಕೊಳ್ಳೋದಕ್ಕೆ ಬರೋದಿಲ್ಲ [ಎನ್ನುತ್ತ ನಾಣಿ ತಟ್ಟೆಯನ್ನು ಎತ್ತಿಕೊಳ್ಳು ವನು. ಆಮೇಲೆ] ಹೇಳು:

ಎನ್ನರಸ,
ಚನ್ನರಸ,
ಪಟ್ಟದರಸ,
ಪ್ರಾಣಕಾಂತ,
ನವಮೋಹನಾಂಗ,
ಅತ್ತೀ ಮಗನೆ,

‘ಆ’ ಅನ್ನು ಸರಿಯಾಗಿ; ‘ಕ’ ಅನ್ನಬೇಡ ಹೇಳೋದಿಲ್ವೇ? ಹೋಗ್ಲಿ ಬಿಡು, ಅತ್ತುಗಿತ್ತೀ. [ನಗುತ್ತ ಹೊರಟು ಹೋಗುವನು]

**[ನಿರ್ಗಮ (ಅ) : ನಾಣಿ.]**

**[ಪ್ರವೇಶ (ಆ) : ನಳಿನಿ.]**

[ನಳಿನಿ ಜಯು ಇಬ್ಬರೂ ವೀಳ್ಯವನ್ನು ಮಡಿಸಿಡುತ್ತಿರುವರು]

ಜಯು

ಅಪ್ಪ ಸ್ವಲ್ಪ ಸಿಟ್ಟಾಗಿರೋ ಹಾಗಿದೆ—ಅಲ್ಲವೇ, ನಳಿನೀ?

ನಳಿನಿ

ಇರಬಹುದು. ನನಗೇನು ಗೊತ್ತು? ಅದಿರಲಿ, ಈಗ ನೀನು ಹಾಡು ಹೇಳಬೇಕಂತೆ—ಅವರು ತಾಂಬೂಲ ಹಾಕ್ಕೊಳ್ಳೋವಾಗ. ಯಾವ ಹಾಡ್ಹೇಳ್ತೀ?

ಜಯು

ನಾ ಹಾಡ್ಹೇಳೋಲ್ಲಮ್ಮ........ನಾಚಿಕೆ ಆಗುತ್ತೆ.

ನಳಿನಿ

ಹಾಗೆಲ್ಲ ಮಾಡಬಾರದು ಜಯೂ. 'ಪ್ರಭುಜೀ' ಹೇಳು.

ಜಯು

ನೀನೂ ಜೊತೆಗೆ ಹೇಳಿದರೆ ಹೇಳ್ತೀನಿ.

ನಳಿನಿ

ನನ್ನ ಧ್ವನಿ ಚನ್ನಾಗಿಲ್ಲಾಮ್ಮ ಈಹೊತ್ತು. ಇಲ್ದೇ ಇದ್ರೆ ನಾನೂ ಮಧ್ಯೆಮಧ್ಯೆ ಹಾಗೆ ಕಲಸ್ತಿದ್ದೆ ಸ್ವಲ್ಪ........ [ಒಳಬಾಗಿಲ ಕಡೆ ನೋಡಿ] ಅಗೋ ಊಟ ಮುಗೀತು, ಬರ್ತಾ ಇದಾರೆ. ಹೋಗೋಣ ಬಾ. [ಎಂದು ನಳಿನಿ ಅವಸರವಾಗಿ ಒಳಕ್ಕೆ ಹೋಗುವಳು.]

[ನಿರ್ಗಮ (ಅ) : ನಳಿನಿ.]

[ಜಯು ನಿಧಾನವಾಗಿ ಒಳಕ್ಕೆ ಹೋಗುತ್ತಿರುವಳು.]

[ಪ್ರವೇಶ (ಅ) : ರಮೇಶ್.]

[ರಮೇಶನು ಭೋಜನ ಸಂತೃಪ್ತನಾಗಿ ಎದುರಿಗೆ ಬರುವನು. ರಮೇಶ, ಜಯು ಒಬ್ಬರನ್ನೊಬ್ಬರು ಹಠಾತ್ತಾಗಿ ನೋಡಿ, ಒಂದೊಂದು ಹೆಜ್ಜೆ ಹಿಂದಕ್ಕೆ ಇಟ್ಟು ಕ್ಷಣಕಾಲ ಮೌನವಾಗಿ ಪರಸ್ಪರ ಈಕ್ಷಿಸುತ್ತ ನಿಲ್ಲುವರು. ಆಮೇಲೆ ಜಯು ಅವಸರವಾಗಿ ಒಳಕ್ಕೆ ಹೋಗುವಳು.]

[ನಿರ್ಗಮ (ಅ) : ಜಯು.]

[ರಮೇಶನು ಅವಳು ಹೋದ ಕಡೆ ನೋಡುತ್ತ ನಿಲ್ಲುವನು.]

[ ಪ್ರವೇಶ (ಅ) : ಚಂದು.]

**ಚಂದು**

ಏನು ರಮೇಶ್, ಹಾಗೆ ನೋಡ್ತಾ ಇದ್ದೀ?

**ರಮೇಶ್**

ಎಷ್ಟು ಚನ್ನಾಗಿದ್ದಾಳೆ ನೋಡಿದ್ಯಾ?

**ಚಂದು**

ಇಲ್ಲ, ನೋಡಲಿಲ್ಲ. [ಎನ್ನುತ್ತ ಒಳಕ್ಕೆ ನೋಡಿ] ನಾಳೆ ದಿವಸ ರಾಯಾಪುರದಲ್ಲಿ ನರಸಪ್ಪನ ಮಗಳು ಇಷ್ಟುಮಟ್ಟಿಗಿದ್ದರೆ ಒಪ್ತೀಯೋ?

**ರಮೇಶ್**

ಓಹೋ, ಧಾರಾಳವಾಗಿ! [ಎನ್ನುತ್ತ ಮೇಜಿನ ಬಳಿ ಬಂದು] ತಾಂಬೂಲ ನೋಡಿದ್ಯಾ ಎಷ್ಟು ಚನ್ನಾಗಿ ಮಡಿಸಿಟ್ಟಿದ್ದಾಳೆ! Handsome is that handsome does!

**ಚಂದು**

ಸಧ್ಯ ಸುಮ್ಮನಿರು. ಇದು ಪರಸ್ಥಳ. ಹೊಟೇಲು. ಯಾರಿಗಾದರೂ ಕೇಳಿಸೀತು.

### ರಮೇಶ್

ಈ ಹೋಟೇಲ್‌ನಲ್ಲಿ ಪರಿಚಾರಕರಿಲ್ಲದೇ ಇದ್ದರೂ, ಮನೆಯವರೇ ಎಲ್ಲಾ ಕೆಲಸಗಳನ್ನೂ ಎಷ್ಟು ಅಚ್ಚುಕಟ್ಟಾಗಿ ಮಾಡಿಕೊಂಡ್ಹೋಗ್ತಾ ಇದಾರೆ, ನೋಡಿದ್ಯಾ !

### ಚಂದು

ಹೀಗಿದ್ದರೇನೇ ಹಳ್ಳಿಗಳಲ್ಲಿ ಹೋಟೇಲುಗಳು ನಡೆಯೋದು ಸಾಧ್ಯವಾಗೋದು. ದೊಡ್ಡ ಪಟ್ಟಣಗಳಾದರೆ ವ್ಯಾಪಾರ ಜಾಸ್ತಿ ಆಗುತ್ತೆ, ಪರಿಚಾರಕರಿಗೆ ಸಂಬಳ ಕೊಡಬಹುದು. ಹಳ್ಳೀಲಿ ಅದೆಲ್ಲ ಹೇಗೆ ಸಾಧ್ಯ?

### ರಮೇಶ್

ಅದೇನೋ ಸರಿಯೇ. ಆದರೂ ಈ ಹೋಟೇಲ್ ಮಾಲೀಕರು ತುಂಬಾ ಜಾಣರು. ವ್ಯಾಪಾರವಾಗದೇ ಮಿಕ್ಹೋದ ಲಾಡು ಚಿರೋಟಿ ಎಲ್ಲಾ ನಮ್ಮೂಟಕ್ಕೆ ಖರ್ಚು ಮಾಡಿಬಿಟ್ರು !

### ಚಂದು

ಅವರೇನಾದರೂ ಮಾಡಿಕೊಳ್ಳಿ. ಹಸಿದುಕೊಂಡು ಬಂದಿದ್ದ ನಮಗೆ ಪುಷ್ಕಳವಾಗಿ ಊಟ ಆಯ್ತೋ ಇಲ್ವೋ? — ಅಷ್ಟು ಮುಖ್ಯ.
[ಎನ್ನುತ್ತ (ಟ) ಕುರ್ಚಿಯಲ್ಲಿ ಕುಳಿತುಕೊಳ್ಳುವನು.]

### ರಮೇಶ್

ಊಟವೇನೋ ಸೊಗಸಾಗಾಯ್ತು. [ಎನ್ನುತ್ತ (ಚ) ಕುರ್ಚಿಯಲ್ಲಿ ಕುಳಿತುಕೊಳ್ಳುವನು.]

[ಇಬ್ಬರೂ ತಾಂಬೂಲ ಚರ್ವಣವನ್ನು ಪ್ರಾರಂಭಿಸುವರು.]

**[ಪ್ರವೇಶ (ಅ) : ನರಸಪ್ಪ.]**

[ನರಸಪ್ಪನು ಹಣ್ಣಿನ ತಟ್ಟೆಯ ಸಮೇತ ಪ್ರವೇಶಿಸಿ, ಅವರನ್ನು ನೋಡಿ ಅಸಮಾಧಾನದಿಂದ (ಯ) ಎಂಬಲ್ಲಿ ನಿಲ್ಲುವನು.]

ನರಸಪ್ಪ

[ತನ್ನಲ್ಲಿ] ನಾ ಬರೋದರೊಳಗಾಗಿ ತಾಂಬೂಲಾನೂ ಮುಗಿಸಿಬಿಟ್ಟಿದಾನೆ! ಸ್ವಲ್ಪವಾದರೂ ಘನತೆಯಿಲ್ಲ...... ಸುಮ್ನೆ ಸಮಾಧಾನ ಹೇಳ್ತಾಳೆವಳು ...... ಆಗ್ಲಿ, ಸಮಾಧಾನವಾಗೇ ಇನ್ನೂ ಸ್ವಲ್ಪಕಾಲ ನೋಡೋಣ............

ರಮೇಶ್

ಬನ್ನಿ ಯಜಮಾನ್ರೇ, ತಾಂಬೂಲ ತಕೊಳ್ಳೋಣಾಗ್ಲಿ ನಮ್ಮ ಜೊತೇಲಿ............ಓಹೋ, ಏನು ಹಣ್ಣು ತಂದಿದೀರೋ?

ನರಸಪ್ಪ

ತಕೊಳ್ಳೋಣಾಗ್ಲಿ. [ತಟ್ಟೆಯನ್ನು ಮೇಜಿನ ಮೇಲಿಟ್ಟು ಕುಳಿತುಕೊಳುವನು (ಕ). ]

ರಮೇಶ್

ಓಹೋ, ಸೇಬು! ದ್ರಾಕ್ಷಿ! ಕಿತ್ಲೇಹಣ್ಣು! ....... ಏನು ಧಾರಣೆ ಈ ವೂರಲ್ಲಿ ಕಿತ್ತಲೇ ಹಣ್ಣು—ಡರ್ಜನಿಗೇ?

ನರಸಪ್ಪ

ಏನೋ ಇದೇನ್ರಿ. [ಎಂದು ಅಸಮಾಧಾನದಿಂದ ಮುಖವನ್ನು ಒಂದು ಕಡೆಗೆ ತಿರುಗಿಸುವನು.]

ಚಂದು

ಇದನ್ನೆಲ್ಲಾ ತಕೊಳ್ಳೋದಕ್ಕೆ ಹೊಟ್ಟೇಲಿ ಜಾಗವೇ ಇಲ್ವಲ್ಲಾ ಸ್ವಾಮೀ. ಸೊಗಸಾದ ಅಡಿಗೇ ಮಾಡಿಸಿದ್ದಿರಿ.

ರಮೇಶ್

ಸಾರಿಗೆ ಮಾತ್ರ ಸ್ವಲ್ಪ ಉಪ್ಪು ಮುಂದಾಗಿತ್ತು — ಅಷ್ಟೆ. ಉಳಿದ ದ್ದೆಲ್ಲಾ ಚನ್ನಾಗಿತ್ತು.

ಚಂದು

ನಿಂಬೇಹುಳಿ ಬಿದ್ಮೇಲೆ ಸಾರೂ ಸರಿಹೋಯ್ತು.

ರಮೇಶ್

[ಸ್ವಲ್ಪ ಕೆಮ್ಮುತ್ತ] ನಿಮ್ಮ ಕಡೆ ವೀಳ್ಯದೆಲೆ ಸ್ವಲ್ಪ ಖಾರ ಸ್ವಾಮಿ.

ಚಂದು

ಈ ಪ್ರಾಂತದಲ್ಲಿ ಸಿಗೋದೇ ಅದು. ಅದಕ್ಕೆ ಅವರೇನು ಮಾಡ್ತಾರು ಪಾಪ!

[ಪ್ರವೇಶ (ಅ) : ಜಯು.]

[ ಜಯು ಹಾರ್ಮೋನಿಯಂ ತಂದು (ಯ) ಎಂಬಲ್ಲಿ ಜಂಖಾನದ ಮೇಲಿಟ್ಟುಕೊಂಡು ನುಡಿಸುತ್ತ ಹಾಡುವಳು. ರಮೇಶ್ ಮತ್ತು ಚಂದು ಆಗಾಗ ಅರ್ಥಗರ್ಭಿತವಾಗಿ ಪರಸ್ಪರ ಮುಖಗಳನ್ನು ನೋಡಿಕೊಳ್ಳುತ್ತ, ಹಣ್ಣು ತಿನ್ನುತ್ತ, ಆಲಿಸುವರು. ಹಾಡು ಮುಗಿದ ಮೇಲೆ ಜಯು ಎದ್ದು ನಾಚಿಕೆಯಿಂದ ಒಳಕ್ಕೆ ಹೋಗುವಳು. ]

[ನಿರ್ಗಮ (ಅ) : ಜಯು.]

ರಮೇಶ್

‘ಟ್ಯೂರ್ನ್’ ಇಡಿಸಿದ್ದೀರೋ ಸಂಗೀತಕ್ಕೇ?

ನರಸಪ್ಪ

ಮನೇಲಿ ಅವರವರೇ ಅಭ್ಯಾಸ ಮಾಡಿಕೊಂಡಿದಾರೇನ್ನಿ. ........ ಇನ್ನೇನು, ನಿಮ್ಮ ಊರು ಕಡೆ........

*

ರಮೇಶ್

ಊಹೂಂ. ಮಳೆ, ಬೆಳೆ, ಎಲ್ಲಾ ಚನ್ನಾಗಾಗಿದೇಂತ ಇಟ್ಟುಕೊಳ್ಳಿ.

ಚಂದು

ಅಮಲ್ದಾರ್ ಗುಂಡಪ್ಪನೋರ ಕುದುರೆ ನೋಡಿದ್ದಿರೋ ನೀವೂ?

ನರಸಪ್ಪ

[ಉತ್ಸಾಹದಿಂದ] ಆಹಾ ! ನಾ ಕಾಣೆನೇ? ತಾಜಾ ಕುದುರೆ!....... ಆಳೂ ಕೈಎತ್ತರ!........ ಮೂಗಿನ ಮೇಲೆ ಬಿಳೀಪಟ್ಟೆ ಅದಕ್ಕೆ! ........ರಾಜಠೀವಿಯಿಂಥ ನಿಂತುಕೊಳ್ಳೋದು ! ........ಹೊರಟಿತು ಅಂದರೆ, ಅದೇನು ವೇಗ ಅಂತೀರೀ!........ಒಂದ್ಸಲಾ, ಗುಂಡಪ್ಪ ನೋರು............

ರಮೇಶ್

ಅದೇ ಹೇಳಿದಿರಲ್ಲಾ ಆಗ್ಲೇ—ಕುಳ್ಳರ ಕಥೆ!

ನರಸಪ್ಪ

ಅದಲ್ಲ; ಇದು ಇನ್ನೊಂದು,........ಬೇರೆ.

ಚಂದು

ಓಹೋ, ಇನ್ನೊಂದೋ? ಬೇರೇನೊ?........ಊಂ, ಹೇಳಿ, ಹೇಳಿ.

ರಮೇಶ್

[ಚಂದೂಗೆ ಮೆಲ್ಲಗೆ] ನಿದ್ರೇ ಬರ್ತಾ ಇದೆಯಲ್ಲಾ !

ಚಂದು

[ರಮೇಶ್‌ಗೆ ಮೆಲ್ಲನೆ] ನನಗೂ ನಿದ್ರೆ ಬರ್ತಾ ಇದೆ.

ನರಸಪ್ಪ

ಒಂದ್ಸಲ ಗುಂಡಪ್ನೋರು ತಾಲ್ಲೂಕಿನಿಂದ ಡಿಸ್ಟ್ರಿಕ್ಟ್‌ಗೆ ಹೋಗ ಬೇಕೂಂತ ರಾತ್ರಿ ಊಟ ಮುಗಿಸಿಕೊಂಡು ಕುದುರೇಗಾಡಿ ಹೂಡಿಸಿ ದರು.... ....೪೫ ಮೈಲಿ ಪ್ರಯಾಣ!..........ಗಾಡೀಲಿ ಸಾಹೇಬರು, ಗಾಡೀವನು, ಇಬ್ರೂ ನಿದ್ರೆಹೋಗಿಬಿಟ್ಟರು..........ಕುದುರೆ ಸಲೀ ಸಾಗಿ ಓಡಿ, ಅರ್ಧರಾತ್ರೀಗೇ ೪೫ ಮೈಲಿ ದಾರಿ ಮುಗಿಸಿ, ಟ್ರಾವೆ ಲರ್ಸ್ ಬಂಗ್ಲೆ ಮುಂದೆ ನಿಂತುಕೊಂಡ್ತು—ಅಭ್ಯಾಸ ಅದಕ್ಕೆ !.......... ಗಾಡೀವನು ಇಷ್ಟು ಜಾಗ್ರತೆ ಊರೆಲ್ಲಿ ಸಿಕ್ಕಿತು ಅಂತ, ಅರ್ಧ ನಿದ್ರೇಲೇ 'ಹೇ' ಅಂದ.

ರಮೇಶ್

[ತೂಕಡಿಸುತ್ತಿದ್ದವನು ಬೆಚ್ಚಿ] ಅಂ ?

ನರಸಪ್ಪ

'ಹೇ' ಅಂದಾ ಅಂದೆ.

ರಮೇಶ್ ಮತ್ತು ಚಂದು

[ಕಣ್ಣುಜ್ಜಿಕೊಳ್ಳುತ್ತ] ಊಂ, ಊಂ, 'ಹೇ' ಅಂದ.

ನರಸಪ್ಪ

ಆಗ ಕುದುರೆ ಏನ್ಮಾಡಬೇಕೂ?..........ವಾಪಸ್ ತಿರುಗಿ ಓಡಿತು. ..........ಅರುಣೋದಯಕ್ಕೆ ಮತ್ತೆ ನಿಂತಿತು. ಆಗ ಕಣ್ಣುಬಿಟ್ಟು ನೋಡ್ತಾರೇ! — ಹೊರಟ ಜಾಗದಲ್ಲಿ ಬಂದು ನಿಂತುಬಿಟ್ಟದೆ: ೪೫, ೪೫ ಒಟ್ಟು ೯೦ ಮೈಲಿ ಪ್ರಯಾಣ ಮುಗಿಸಿಕೊಂಡು!.......... ಅಂಥಾ ವೇಗ ಆ ಕುದುರೆ !!

ರಮೇಶ್

ಕ್ಷಮಿಸಬೇಕು, ಯಜಮಾನ್ರೇ, ನಿದ್ರೆ ಬರ್ತಾ ಇದೆ. ಕಥೆ ಸರಿ

ಯಾಗಿ ಕೇಳ್ಳಿಲ್ಲ. ಬೆಳಗ್ಗೆ ಇನ್ನೊಂದ್ಸಲ ಹೇಳೀವಿರಂತೆ. ಈಗ ನಮಗೆ ಮಲಗಿಕೊಳ್ಳೋದಕ್ಕೆ ಕೊಠಡೀ........?

### ನರಸಪ್ಪ

[ತುಂಬಾ ಅಸಮಾಧಾನದಿಂದ (ಯ) ಎಂಬಲ್ಲಿಗೆ ಬಂದು, ತನ್ನಲ್ಲಿ] ಮದುವೇ ಮಾತು ಹಾಗಿರಲಿ; ಸಧ್ಯ, ಬೆಳಗ್ಗೆ ಈ ಮಹಾರಾಯನ್ನ ಸಾಘಾಕಿದರೆ ಗೆದ್ದೆ. ಅಳಿಯನಾಗೋನು ಹೀಗೇನೇ ಮಾತಾಡೋದೂ? ........[ರಮೇಶ್ ಮತ್ತು ಚಂದೂಗೆ] ರಾಯರೇ,........[(ಇ) ಎಂಬ ಕಡೆ ಬೆರಳು ತೋರಿಸುತ್ತ] ಅಗೋ ಅಲ್ಲಿದೋ ಆ ಎರಡು ಕೊಠಡಿಗಳಲ್ಲಿ ತಾವಿಬ್ಬರೂ ವಿಶ್ರಾಂತಿ ತಕೋಬಹುದು. ನಾಳೆ ಬೆಳಗ್ಗೆ ಹೊರಡೋಣಾಗುತ್ತೆ ತಾನೇ?

### ರಮೇಶ್

ಬೆಳಗಿನ ಮಾತು ಬೆಳಗ್ಗೆ. ಈಗ ಸಧ್ಯ ಹಾಸಿಗೆ ಕಾಣಬೇಕು.

**[ನಿರ್ಗಮ (ಇ) : ರಮೇಶ್ ಮತ್ತು ಚಂದು.]**

### ನರಸಪ್ಪ

[ತನ್ನಲ್ಲಿ] ಈ ಮಹಾರಾಯನ್ನೇನೇ ಆಗ ಆ ಪುರೋಹಿತರು ಅಷ್ಟು ಕೊಂಡಾಡಿದ್ದೂ? — "ಸಕಲಗುಣಸಂಪನ್ನ! ನಯ, ವಿನಯ, ದೊಡ್ಡೋರು ಚಿಕ್ಕೋರು ಅನ್ನೋ ತಾರತಮ್ಯ, ಹಾಗೆ, ಹೀಗೆ" ಅಂತ?........ಅಂ?........ಗೋವಿಂದ!

**[ಪ್ರವೇಶ (ಅ) : ಭಾಗಮ್ಮ.]**

### ಭಾಗಮ್ಮ

[ಸಂತೋಷದಿಂದ] ಊಟ, ಉಪಚಾರ ಎಲ್ಲಾ ಸರಿಯಾಗೇ ಆದ್ಹಾಗಾಯ್ತಲ್ಲ? ಅಥವಾ ಏನಾದ್ರೂ ಲೋಪ ಆಯ್ತೋ?

ನರಸಪ್ಪ

ಲೋಪ ಬೇರೇನೇ, ಈ ಮಹಾಶಯನಿಗೆ? ........ ನಿನಗೆಲ್ಲೋ ಭ್ರಾಂತಿ!

ಭಾಗಮ್ಮ

ಯಾಕೆ ಅಂದ್ರೆ?........ನೀವು ದುಡುಕಬೇಡಿ. ಎಲ್ರೂ ನಿಮ್ಮ ನೇರಕ್ಕೇ ಇರಬೇಕು ಅಂದ್ರೆ ಆಗುತ್ಯೇ?... ....ಏನೋ ಈಗಿನ ಕಾಲದೋರು ಅವರು. ಅವರ ಮಾತು ನಿಮಗೊಂದು ನಮೂನೆಯಾಗಿ ಕಾಣ ಬಹುದು. ಆದರೆ ಇಂಥಾ ಶ್ರೀಮಂತರು ನಮಗೆ ಮತ್ತೆ ಸಿಗ್ತಾರೆಯೆ? ........ಈಗೇನಾಯ್ತು ಹೇಳಿ.

ನರಸಪ್ಪ

[ಬೇಸರದಿಂದ] ಈಗ ಏನಾದರೂ ಆಗಲಿ, ಆಗಿಲ್ದೇ ಇರಲಿ; ನೀ ಏನಾದರೂ ಹೇಳು, ಬಿಡು — ನಾನಂತು ಮನಸ್ಸಿನಲ್ಲಿ ದೃಢವಾಡಿ ಕೊಂಡಿದೀನಿ: ಇವನಿಗೆ ಹೆಣ್ಣು ಕೊಡೋದಿಲ್ಲ.

ಭಾಗಮ್ಮ

[ಕೈಹಿಡಿದು] ಅಯ್ಯೋ ಅಯ್ಯೋ!........ಹಾಗಲ್ಲ........ಇಲ್ಲಿ ಕೇಳಿ ನಾ ಹೇಳೋದು ಸ್ವಲ್ಪಾ............

ನರಸಪ್ಪ

ನೀ ಹೇಳಬೇಕಾದ್ದೇನೂ ಇಲ್ಲ.

ಭಾಗಮ್ಮ

[ಕೈಬಿಟ್ಟು] ಬಿಡಿ ಹಾಗಾದ್ರೆ. ........ ನನ್ನ ಮಾತು ಅಂದರೆ ನಿಮಗೆ ಯಾವಾಗ್ಲೂ ಹೀಗೇ—ಅಸಡ್ಡೆ.

ನರಸಪ್ಪ

ಆಯ್ತು. ಈಗ ನೀ ಹೇಳೋದೇನೂ?

ಭಾಗಮ್ಮ

[ಅಸ್ಪಷ್ಟವಾಗಿ] ಮತ್ತೇ ಏ........

ನರಸಪ್ಪ

ಊಂ........

[ ಪ್ರವೇಶ (ಇ) : ಚಂದು.]

ಭಾಗಮ್ಮ

[ಪ್ರವೇಶಿಸುತ್ತಿರುವ ಚಂದುವನ್ನು ನೋಡಿ ಮೆಲ್ಲನೆ] ಆಗೋ ಅವರು ಮತ್ತೆ ಯಾಕೋ ಎದ್ದು ಬಂದ್ರು. ಒಳಕ್ಕೆ ಬನ್ನಿ; ನಿಧಾನವಾಗಿ ಮಾತಾಡೋಣ.

[ ನಿರ್ಗಮ (ಅ) : ಭಾಗಮ್ಮ.]

ಚಂದು

ಕ್ಷಮಿಸಬೇಕು—ಕುಡಿಯೋದಕ್ಕೆ ಸ್ವಲ್ಪ ನೀರು ಬೇಕಾಗಿತ್ತು ಊ-.

ನರಸಪ್ಪ

ತಂದುಕೊಡ್ತೇನೆ. [ನೀರು ತಂದುಕೊಟ್ಟು, ಒಳಕ್ಕೆ ಹೋಗುತ್ತಿರುವನು.]

ಚಂದು

ತುಂಬಾ ಶ್ರಮ ಕೊಟ್ಟೆ ತಮಗೆ........ಎಹೆಹೆ........

ನರಸಪ್ಪ

ಏನೂ ಇಲ್ಲ, ಏನೂ ಇಲ್ಲ........[ಎನ್ನುತ್ತ ಒಳಕ್ಕೆ ಹೋಗುವನು.]

[ನಿರ್ಗಮ (ಅ) : ನರಸಪ್ಪ.]

## ಚಂದು

[ (ಆ) ಕುರ್ಚಿಯಲ್ಲಿ ಕುಳಿತು, ನೀರು ಕುಡಿದು, ಎದ್ದು ಶತಪಥ ಹಾಕುತ್ತ] ನಿದ್ರೆ ಹತ್ತ್ತೋ ಹೊತ್ತ್ಗೆ ಸರಿಯಾಗಿ ಈ ದಂಪತಿಗಳು ಏನೋ ಮಾತಿಗ್ಹಚ್ಚಿಬಿಟ್ರು ಇಲ್ಲಿ — ಅವರ ಗೃಹಕೃತ್ಯ; ಎಚ್ಚರವಾಗ್ಹೋಯ್ತು. ಮೊದಲೇ ನನಗೆ ಹೊಸಜಾಗದಲ್ಲಿ ನಿದ್ರೆ ಬರೋದಿಲ್ಲಾ. [ಎನ್ನುತ್ತ (ಇ) ಬಳಿಗೆ ಹೋಗಿ] ರಮೇಶ್ [ಎಂದು ಕೂಗಿ, ಈಚೆ ಬಂದು] ಅವನೇನೋ ನಿದ್ರೆಹೋಗಿಬಿಟ್ಟಿದಾನೆ. ಯಾಕೆಬ್ಬಿಸಬೇಕು, ಪಾಪ, ದಣಿದಿದಾನೆ. ಬೆಳಗ್ಗೆ ಮತ್ತೆ ಪ್ರಯಾಣ! ಆ ರಾಯಾಪುರಾನ್ನೋದು ಇನ್ನೂ ಎಷ್ಟುದೂರ ಇದೆಯೋ ಏನೋ! ........ಅಳಿಯನ ಹಿಂದೆ ಗೆಳೆಯನಾಗಿ ಬರೋದೇನು ಸಾಮಾನ್ಯವೆ? ನಾಳೆ ಅವರ ಮಾವನ ಮನೇಲಿ ಏನೂ ಹೆಚ್ಚುಕಡಮೆ ಆಗದ್ಹಾಗೆ ನೋಡಿಕೊಳ್ಳೋ ಭಾರ ಗೆಳೆಯನಾಗಿ ಬಂದಿರೋ ನಂದು! ಈ ರಮೇಶನಿಗೋ, ಮಹಾನಾಚಿಕೆ ಮಾವನ ಮನೆ ಅಂದರೆ!........ ನಾಳೆ ರಾಯಾಪುರದಲ್ಲಿ ಹ್ಯಾಗೆ ಹ್ಯಾಗೆ ಆಗುತ್ತೋ ನೋಡಬೇಕು. ........ [ಒಳಬಾಗಿಲ (ಅ) ಕಡೆ ನೋಡಿ] ಇದೇನು! ಈ ಹೆಣ್ಣುಮಗಳ್ಯಾರೋ ಅಳುತಾ ಬರ್ತಾ ಇದಾಳಲ್ಲಾ! [ಎಂದು (ಅ) ಬಾಗಿಲ ಬಳಿ ಸ್ವಲ್ಪ ಮರೆಯಾಗಿ ನಿಲ್ಲುವನು.]

### [ ಪ್ರವೇಶ (ಅ) : ನಳಿನಿ ಮತ್ತು ಜಯು. ]

[ಸೆರಗಿನ ಸಹಾಯದಿಂದ ದುಃಖಿಸುತ್ತಿರುವ ನಳಿನಿಯನ್ನು ಸಂತೈಸುತ್ತ ಜಯು ಪ್ರವೇಶಿಸುವಳು.]

## ಜಯು

ನಳಿನೀ,........ನಿಧಾನ ತಂದುಕೋ........ಇಷ್ಟು ಹೊತ್ತಿನಲ್ಲಿ ಹೀಗೆ ಅತ್ತರೆ ಹ್ಯಾಗೆ?

ನಳಿನಿ

[ಉದ್ವೇಗದಿಂದ] ಜಯೂ, ನನ್ನ ಗೋಳು ಕೇಳೋರೇ ಇಲ್ಲ ವಾಯಿತು...........

ಚಂದು

[ಪಕ್ಕದಲ್ಲಿ ಕಾಣಿಸಿಕೊಂಡು ತನ್ನಲ್ಲಿ] ಇವಳು ನನ್ನ ಬಾಲ್ಯದ ಗೆಳತಿ ನಳಿನಿ ಯಲ್ಲವೇ? [ನೋಡಿ] ಅಹುದು, ಅವಳೇ! ಸಂಶಯವಿಲ್ಲ. ಆದರೆ ನಳಿನಿ ಈ ಹೊಟೇಲಿಗೆ ಬಂದದ್ದಾದರೂ ಹೇಗೆ? ಹೀಗೆ ಅಳುತ್ತಿರೋದೇಕೆ? ಒಂದೂ ಅರ್ಥವಾಗೋದಿಲ್ಲವಲ್ಲಾ !

ಜಯು

ನಳಿನೀ, ದೇವರ ಇಚ್ಛೆ ಹೇಗಿದೆಯೋ ಬಲ್ಲವರ್ಯಾರು? ನೀನು ನಾಣಿಯ ಕೈಯನ್ನೇ ಹಿಡಿಯಬೇಕೆಂದು ದೈವಸಂಕಲ್ಪ ಇದ್ದರೆ ಅದನ್ನು ತಪ್ಪಿಸೋದು ಯಾರಿಂದ ಸಾಧ್ಯ?

ನಳಿನಿ

ನಾಣಿ ಚಿಕ್ಕಂದಿನಿಂದಲೂ ಶಿಕ್ಷೆಯಲ್ಲಿ ಬೆಳೆದು ವಿದ್ಯಾವಂತನಾಗಿದ್ದಿದ್ದರೆ ಎಷ್ಟು ಚನ್ನಾಗಿತ್ತು. ಈ ವಯಸ್ಸಿನಲ್ಲಿ ಅವನಿಗೆ ಒಂದು ಕ್ಷೇಮ ಸಮಾಚಾರದ ಕಾಗದವನ್ನೋದುವುದಕ್ಕೆ ಸಹ ಬರುವುದಿಲ್ಲವಲ್ಲ. ........ಈ ವೂರಲ್ಲಿ ಆ ನಾಟಕ ಕಟ್ಟಿಕೊಂಡು ಹಾಳಾಗಿಹೋಗಿದಾನೆ. ಅವನನ್ನು ನೋಡಿದರೆ ಕನಿಕರವಾಗುತ್ತೆ. ಅಂಥವನನ್ನು ಕಟ್ಟಿಕೊಂಡು ಸಂಸಾರ ಮಾಡುವುದು ಸಾಧ್ಯವೇ, ಹೇಳು.

ಜಯು

ಅದೇನೋ ನಿಜವೇ. ಆದರೆ ನಿನ್ನ ಮನಸ್ಸಿನಲ್ಲಿರುವವರು ಯಾರು ಹೇಳು........ನಾನು ಯಾರ ಮುಂದೂ ಹೇಳೋದಿಲ್ಲ.

ನಳಿನಿ

ಹೇಳಲಾಗದ್ದನ್ನು ಹೇಳು ಅಂದರೆ ಏನು ಹೇಳಲಿ ?

ಜಯು

ನನ್ನ ಮುಂದೆ ಹೇಳಬಾರದೇ ?

ನಳಿನಿ

[ಗಾಳಿಯಲ್ಲಿ ದೃಷ್ಟಿಯನ್ನು ನೆಟ್ಟು]........ಹಾಗಾದರೆ ಯಾರ ಮುಂದೂ ಹೇಳಬೇಡ........ನಮ್ಮೂರಲ್ಲಿ ಒಬ್ಬರಿದ್ದರು ........ ಚಿಕ್ಕಂದು ನಾವಿಬ್ಬರೂ ಜೊತೆಯಲ್ಲಿ ಆಟವಾಡುತ್ತಿದ್ದೆವು, ಶಾಲೆಗೆ ಹೋಗುತ್ತಿದ್ದೆವು.

ಜಯು

ಆತನ ಹೆಸರು ?

ನಳಿನಿ

ಚಂದ್ರಶೇಖರರಾವ್........ನಾವು ಚಂದು ಎಂದು ಕರೆಯುತ್ತಿದ್ದೆವು. ಆತನನ್ನು ಮರೆಯಲು — ನನ್ನ ಮನಸ್ಸಿನಿಂದ ತೊಡೆದು ಹಾಕಲು ಎಷ್ಟೋ ಪ್ರಯತ್ನ ಮಾಡಿದ್ದೇನೆ; ಸಾಧ್ಯವಾಗಿಲ್ಲ.

ಚಂದು

[ತಲೆದೂಗುತ್ತ, ತನ್ನಲ್ಲಿ] ನಿನ್ನನ್ನು ಮರೆಯುವುದು ನನಗೂ ಸಾಧ್ಯವಾಗಿಲ್ಲ.

ಜಯು

ಈಗ ಅವರು ಎಲ್ಲಿದ್ದಾರೆ ?

ಚಂದು

[ತನ್ನಲ್ಲಿ] ಹುಂ...........

ನಳಿನಿ

ಎಲ್ಲಿದ್ದಾರೋ ತಿಳಿಯದು........ಆದರೆ ಅದನ್ನು ತಿಳಿಯುವುದು ಕಷ್ಟವಾಗಲಾರದು.

ಜಯು

ಆತನು ನಿನ್ನನ್ನು ಮದುವೆಯಾಗುವುದಕ್ಕೆ ಸಮ್ಮತಿಸುತ್ತಾನೋ ಇಲ್ಲವೋ, ಅದು ಹೇಗೆ ಗೊತ್ತು ?

ನಳಿನಿ

ಆತನಿಗೆ ನನ್ನಲ್ಲಿ ಪ್ರೇಮವಿದೆಯೆಂಬ ವಿಷಯವಾಗಿ ನನಗೆ ಎಳ್ಳಷ್ಟೂ ಸಂಶಯವಿಲ್ಲ.

ಜಯು

ಆದರೆ ಇಲ್ಲಿ ಮನೆಯಲ್ಲಿ ಹಿರಿಯರ ಸಂಕಲ್ಪ ಹಾಗಿದೆ; ನಿನ್ನ ಮನಸ್ಸು ಹೀಗಿದೆ. ಇವೆರಡೂ ಹೇಗೆ ಹೊಂದಿಕೆಯಾಗಬೇಕು ? ನನಗೇನೂ ತೋಚೋದಿಲ್ಲ........ತಾಳು; ದೇವರ ಮುಂದೆ ದೀವಿಗೆ ಇಡುತ್ತೇನೆ, ಪ್ರಾರ್ಥನೆ ಮಾಡುವಿಯಂತೆ. ನನಗೆ ಅಳು ಬಂದಾಗ ನಾನು ಹಾಗೆ ಮಾಡುತ್ತೇನೆ. ಅದರಿಂದ ಮನಸ್ಸು ಹಗುರವಾಗುತ್ತೆ. ನೀನೂ ಹಾಗೇ ಮಾಡು........ನನ್ನ ಮಾತು ಕೇಳು........ಸ್ವಲ್ಪ ನಿಧಾನ ತಂದುಕೊಂಡು ದೇವರ ಮನೆಗೆ ಬಾ. ನಾನು ಆ ವೇಳೆಗೆ ಅಲ್ಲಿ ದೀವಿಗೆ ಇಟ್ಟಿರ್ತೇನೆ.

[ನಿರ್ಗಮ (ಅ) : ಜಯು.]

[ನಳಿನಿ ಯೋಚನಾಮಗ್ನಳಾಗಿ ನಿಂತಿರುವಳು.]

ಚಂದು

[ಅಕಸ್ಮಾತ್ತಾಗಿ ಬರುವವನಂತೆ ಬಂದು] ಯಾರು ?........ನಳಿನಿ !!

**ನಳಿನಿ**

[ಚಕಿತಳಾಗಿ] ಚಂದು !! [ಎಂದು ಅವಸರವಾಗಿ ಒಳಕ್ಕೆ ಹೋಗತೊಡಗು ವಳು.]

**ಚಂದು**

ನಳಿನೀ, ತಾಳು. ಹೋಗಬೇಡ.

**ನಳಿನಿ**

[ನಿಂತು] ಇಲ್ಲಿಗೆ ಬಂದ ಬಗೆ ?

**ಚಂದು**

ನನ್ನ ಸ್ನೇಹಿತ ರಮೇಶನ ಜೊತೆಯಲ್ಲಿ ಬಂದೆ. ಇಲ್ಲೇ ಇಳಿದುಕೊಂಡಿ ದೇವೆ. ಆದರೆ ನೀನು ಎಲ್ಲಿಂದ ಬಂದೆ? ಯಾರು ಯಾರು ಬಂದಿ ದ್ದೀರಿ ? ಎಲ್ಲೀಗ್ಹೋಗ್ಬೇಕು ?

**ನಳಿನಿ**

ನಾನು ಇಲ್ಲೇ ಇದೇನೆ.

**ಚಂದು**

ಎಷ್ಟು ದಿನದಿಂದ ?

**ನಳಿನಿ**

ಅಮ್ಮ ಹೋದಾಗಿನಿಂದ........ಮೂರು ವರ್ಷ ಆಯ್ತು.

**ಚಂದು**

ನಿಮ್ಮ ತಂದೆ ತಾಯಿ ತೀರಿಹೋದ ವಿಚಾರ ಕೇಳಿದೆ........ಆದರೆ ........ನೀನು........ಇಲ್ಲಿ ?

**ನಳಿನಿ**

ಮತ್ತೆಲ್ಲಿರಬೇಕು ?

ಚಂದು

ನಿನ್ನ ಬಂಧುಗಳ್ಯಾರೂ ಆಗದೇ ಹೋದರೇ? ಹೀಗೆ ಇಲ್ಲಿ ಬಂದು ಸೇರಲು ನಿನ್ನ ಮನಸ್ಸಾದರೂ ಹೇಗೆ ಒಪ್ಪಿತು?

ನಳಿನಿ

ಇದೇನು ಚಂದು, ಅರ್ಥವಾಗದ ಹಾಗೆ ಮಾತಾಡ್ತಿ?

ಚಂದು

ನೀನು ಹೀಗೆ ಬಂದು ಹೊಟೇಲು ಸೇರಿರೋದು ನನಗೂ ಅರ್ಥ ವಾಗಿಲ್ಲ.

ನಳಿನಿ

ಹೊಟೇಲು? ಭ್ರಾಂತನಾಗಿದ್ದೀ! ಇದು ನಮ್ಮ ಚಿಕ್ಕಮ್ಮನ ಮನೆ ಅಲ್ವೇ? ಇದು ಹೊಟೇಲು ಅಂತ ಯಾರು ಹೇಳಿದರು?

ಚಂದು

ಓಹೋ........ಏನೋ ಪರಪಾಟಾಗಿದೆ ........ ನಿಮ್ಮ ಚಿಕ್ಕಮ್ಮನ ಮನೆಯವರು ನನಗೆ ತಿಳಿಯದು. ಆದರೆ, ಸಾಯಂಕಾಲ ಒಬ್ಬ ತರುಣ ನಮಗೆ ಇದು ಹೊಟೇಲು ಅಂತ ಹೇಳಿದನಲ್ಲ? ಆತನೂ ಇಲ್ಲೇ ಇದಾನಂತೆ?

ನಳಿನಿ

[ಅನುಮಾನದಿಂದ] ಯಾರು ಆತ?

ಚಂದು

[ನಾಣಿಯನ್ನು ವರ್ಣಿಸುವನು.]

ನಳಿನಿ

ಓ! ಹಾಗಾದರೆ ಅವನು ನಾಣಿ! ನಮ್ಮ ಚಿಕ್ಕಮ್ಮನ ತಮ್ಮ. ಏನೋ ಕುಚೇಷ್ಟೆ ಮಾಡಿದಾನೆ. ಅವನು ಯಾವಾಗಲೂ ಹಾಗೇ.

ಚಂದು

ಹಾಗಾದರೆ ನಾವೀಗ ಎಲ್ಲಿದ್ದೇವೆ?

ನಳಿನಿ

ಏಕೆ! ರಾಯಾಪುರದ ಜಮೀನ್ದಾರ್ ನರಸಪ್ಪನ ಮನೆಯಲ್ಲಿ. ಸಂದೇಹವೇನಿದೆ?

ಚಂದು

ನಾಣೀ, ನಾಣೀ, ಎಂಥಾ ಕೆಲಸ ಮಾಡಿದೆ! ಎಷ್ಟು ಅವಿವೇಕವಾಗಿ ಹೋಯ್ತು!! ಈಗ ರಮೇಶನ ಪಾಡೇನು! ಆಹಾ! ನಾವು ಹೊಟೇಲ್ ಮಾಲೀಕನೆಂದು ತಿಳಿದುಕೊಂಡಿದ್ದಾತನೇ ನರಸಪ್ಪ! ಇಷ್ಟೊತ್ತೂ ನಿನ್ನ ಜೊತೆಯಲ್ಲಿದ್ದ ಕನ್ಯೆಯೇ ಜಯಮ್ಮ! ಅಲ್ಲವೆ?

ನಳಿನಿ

[ಬೆಚ್ಚಿ] ಓ !

ಚಂದು

ನಾನು ಅಲ್ಲಿ ನಿಂತು ಇಷ್ಟೊತ್ತೂ ನೀವು ಆಡಿದ ಮಾತೆಲ್ಲ ಕೇಳಿದೆ. ಆಗ ಸರಿಯಾಗಿ ಅರ್ಥವಾಗಲಿಲ್ಲ. ಈಗ ಎಲ್ಲಾ ಗೊತ್ತಾಯಿತು. ನೀನು ಆ ನಾಣೀನ ಮದುವೆಯಾಗಬೇಕು ಅಂತ ಮನೇಲಿ ಮಾತು ನಡೀತಾ ಇದೆಯೋ ಹಾಗಾದರೆ?........ಒಳ್ಳೇದು, ನೀನು ದುಃಖಿಸ ಬೇಡ........ನಳಿನೀ ನನಗೂ ನಿನ್ನ ಯೋಚನೆಯೇ ಇತ್ತು........ [ಎಂದು ಸಮೀಪಕ್ಕೆ ಹೋಗುವನು.]

ನಳಿನಿ

[ಹೊರಬಾಗಿಲ ಕಡೆ ನೋಡಿ] ಆಗೋ ನಾಣಿ ಬರ್ತಿದಾನೆ. [ಎಂದು ಅವಸರವಾಗಿ ಒಳಕ್ಕೆ ಹೋಗುವಳು.]

[ನಿರ್ಗಮ (ಅ) : ನಳಿನಿ.]

[ಚಂದು ಕುಳಿತುಕೊಳ್ಳುವನು (ಚ) ]

## [ಪ್ರವೇಶ (ಅ) : ನಾಣಿ.]

[ ನಾಣಿ ಬಿಚ್ಚಿದ ಛತ್ರಿಯನ್ನು ಹಿಡಿದು ಪ್ರವೇಶಿಸುವನು. ವಸ್ತ್ರವನ್ನು ಮೂಲೆಯಾಗಿ ಮಡಿಸಿ, ಅದನ್ನು ಕ್ರಾಪ್ ಮತ್ತು ಕಿವಿ ಮುಚ್ಚುವಂತೆ ಕಟ್ಟಿಕೊಂಡು ಗಂಟಲಿನ ಬಳಿ ಗಂಟು ಹಾಕಿರುವನು.]

### ನಾಣಿ

[ಬಾಗಿಲಲ್ಲೇ ನಿಂತು, ಛತ್ರಿಯನ್ನು ಮುಚ್ಚಿ, ಮತ್ತೆ ಬಾಗಿಲ ಕಡೆ ತಿರುಗಿ, ಬಾಗಿಲ ಆಚೆ ನಿಂತಿರುವ ಯಾರನ್ನೋ ಸಂಬೋಧಿಸುವವನಂತೆ] ಅಯ್ಯಾ, ನಾಟಕದ ಹುಡುಗರಿರಾ, ಈ ದಿವಸದ ಪ್ರಾಕ್ಟೀಸು ಏನೂ ಸುಖವಾಗಿರಲಿಲ್ಲ. ಮಾತು, ಹಾಡು ಇನ್ನೂ ಒಬ್ರಿಗೂ ಸರಿಯಾಗಿ ಬರೋದಿಲ್ಲ. ನಾಳೆ ಚನ್ನಾಗಿ ಗಟ್ಟಿಮಾಡಿಕೊಂಡು ಬನ್ನಿ. ನಾಳೆ ಪ್ರಾಕ್ಟೀಸಿಗೆ ಯಾರೂ ತಪ್ಪಿಸಿಕೋಕೂಡದು, ಗೊತ್ತಾಯ್ತೋ? ಆ ರಾಣೀವೇಷದ ಕೃಷ್ಣಾಚಾರಿ ಈ ಹೊತ್ತು ಬರಲೇ ಇಲ್ವಲ್ಲಾ. ನಾಳೆ ಕರಕೊಂಡು ಬನ್ನಿ........ಈ ಛತ್ರಿ ಯಾರದು........ನಿಂದೋ? ತಕೋ. ಇನ್ನು ನೀವೆಲ್ಲಾ ಹೋಗಿ ಮಲಕ್ಕೊಳ್ಳಿ, ಹೊತ್ತಾಗಿದೆ. ........[ಈಚೆ ಬಂದು, ಚಂದುವನ್ನು ನೋಡಿ, (ಯ) ಎಂಬಲ್ಲಿ ನಿಂತು, ತನ್ನಲ್ಲಿ] ಇವನಿನ್ನೂ ಎದ್ದೇ ಇದಾನೇ ! [ಎನ್ನುತ್ತ ತಲೆಯ ಮೇಲಿನ ಚೌಕವನ್ನು ಬಿಚ್ಚಿ, ಹೆಗಲ ಮೇಲೆ ಹಾಕಿಕೊಳ್ಳುವನು. ಆಮೇಲೆ ಜೇಬುಗಳಲ್ಲಿ ಕೈಗಳ ನ್ನಿಟ್ಟುಕೊಂಡು, ನಿಧಾನವಾಗಿ ಪಥಪಥಹಾಕುತ್ತ, ಚಂದೂಗೆ] ಏನು ಸ್ವಾಮೀ, ಇನ್ನೂ ನಿದ್ರೆ ಬರಲಿಲ್ವೋ?........ [ಚಂದು ಮುಖವನ್ನು ಆಚೆಗೆ ತಿರುಗಿಸುವನು. ಅದನ್ನು ನೋಡಿ ನಾಣಿ ತನ್ನಲ್ಲಿ] ಜವಾಬೇ ಇಲ್ಲ ! ಹಾಗಾದರೆ ಇವನಿಗ್ಗೊತ್ತಾಗಿಬಿಟ್ಟಿದೆ — ಇದೇ ನರಸಪ್ಪನ ಮನೇಂತ !!........ [ಇಬ್ಬರೂ ಸ್ವಲ್ಪಹೊತ್ತು ಮೌನವಾಗಿರುವರು. ಮಧ್ಯೆ

ಪರಸ್ಪರ ದೃಷ್ಟಿಗಳು ಕಲೆಯುವುವು. ಚಂದು ಅಸಮಾಧಾನವನ್ನು ಸೂಚಿಸು ವನು. ನಾಣಿ (ಯು) ಎಂಬಲ್ಲಿ ನಿಂತು, ಚಂದುವನ್ನೇ ನೋಡುತ್ತ] ..... ಸಖನೇ, ಮುನಿಸೇಕೆ? ಮಾತನಾಡು.

**ಚಂದು**

[ಕಿರುನಗೆಯಿಂದ ತನ್ನಲ್ಲಿ] ಇವನ ಮೇಲೆ ಕೋಪಿಸಿ ಫಲವಿಲ್ಲ........ [ನಾಣಿಗೆ] ದಯಮಾಡ್ಸಿ ನಾರಾಯಣರಾಯರೇ, ಕೂತುಕೊಳ್ಳೋಣಾಗ್ಲಿ.

**ನಾಣಿ**

[ಕುಳಿತು (ಕ)] ಊಟ ಆಯ್ತೋ?

**ಚಂದು**

ಆಯ್ತು ಮಹಾರಾಯರೇ, ಎಲ್ಲಾ ನಿಮ್ಮ ಪ್ರಭಾವ.

**ನಾಣಿ**

ನಾನೇನ್ಮಾಡಿದೆನಪ್ಪಾ?

**ಚಂದು**

ಅಲ್ರೀ, ಇದು ಹೊಟೇಲು ಅನ್ನೋ ಭ್ರಾಂತಿ ಹುಟ್ಟಿಸಿಬಿಡೋದೇ ನೀವು ನಮಗೆ?

**ನಾಣಿ**

ಹುಂ!........ನೋಡೀ, ನೀವು ಆಗ ನನ್ನ ಕೇಳಿದ್ದೇನೂ? 'ರಾಯಾಪುರಕ್ಹೋಗೋ ದಾರಿ ಯಾವುದು? ಅಲ್ದೇ ಇಳುಕೊಳ್ಳೋದಕ್ಕೆ ಇಲ್ಲೆಲ್ಲಾದರೂ ಹೊಟೇಲಿದ್ಯೇ?' ಅಂತ ಕೇಳಿದ್ರಿ. ಹೌದೋ, ಅಲ್ವೋ?

**ಚಂದು**

ಹೌದು.

ನಾಣಿ

ನಾನೇನು ಹೇಳಿದೆ? "ನೀವು ಎಲ್ಲಿಂಗ್ಹೋಗ್ಬೇಕೂಂತ ಇದೀರೋ ಅಲ್ಲೀಗೇ ಬಂದಿದ್ದೀರಿ" ಅಂತ ನಾ ಹೇಳಿದೆ. ಅಂದರೆ "ರಾಯಾ ಪುರಕ್ಕೆ ಬಂದಿದ್ದೀರಿ" ಅನ್ನೋ ಅರ್ಥ. ಇಷ್ಟು ಸ್ಪಷ್ಟವಾಗಿರೋ ಮಾತಿನಿಂದ ನೀವು ಭ್ರಾಂತಿಪಟ್ಟರೇ, ನಾನೇನುಮಾಡ್ಲಿ ಸ್ವಾಮೀ? ........ಹೋಗ್ಲೀ, ಪ್ರಮಾದವೇನೂ ನಡೀಲಿಲ್ಲ ತಾನೇ?

ಚಂದು

ಪ್ರಮಾದವೆಲ್ಲಿಂದಾ ಬಂತೂ? ಆ ಬದಲು ನಮಗೆಲ್ಲ ವಿನೋದ ವಾಗಿ ಹೊತ್ತು ಹೋಯ್ತು, ಅಷ್ಟೆ........ಒಳ್ಳೆ ರಸಿಕರು ಕಾಣ್ರೀ ನೀವೂ!........ಇಷ್ಟೊತ್ತು ಎಲ್ಲಿಂಗೆ ಸಮಯಮಾಡ್ಕೋಡಾಗಿತ್ತು?

ನಾಣಿ

ನಾಟಕದ ಪ್ರಾಕ್ಟೀಸು ಅಂದ್ಮೇಲೆ ಹೊತ್ತಾಗದೇ ಇರುತ್ಯೇ ಸ್ವಾಮೀ?

ಚಂದು

ಓಹೋ! ಹಾಗಾದರೆ ನಾಟಕ ಕಲೆಯಲ್ಲಿ ಕೂಡ ತಮಗೆ ತುಂಬಾ ಪರಿಶ್ರಮವಿದೆ ಅಂಥಾಗಾಯ್ತು........ಅಹುದಹುದು, ನಾಟಕದ ನಾರಾಯಣರಾಯರೂಂತ ತಮ್ಮ ಹೆಸರು ಕೇಳಿದ್ದೆ. ಈಗ ತಮ್ಮನ್ನು ಪ್ರತ್ಯಕ್ಷವಾಗಿ ನೋಡಿಧಾಗಾಯ್ತು. ಈ ವಯಸ್ಸಿ ಗಾಗಲೇ ಎಷ್ಟು ಕುಶಲರಾಗಿದ್ದೀರಿ. ಎಷ್ಟು ಪ್ರಸಿದ್ಧರಾಗಿದ್ದೀರಿ! ತಮ್ಮಂಥಾವರಿಗೆ ಸರಿಯಾದ ಉತ್ತೇಜನ ದೊರೆಯಬೇಕು— ನಮ್ಮ ನಾಟಕಸಾಹಿತ್ಯ ಅಭಿವೃದ್ಧಿಗೆ ಬರಬೇಕಾದರೆ.

ನಾಣಿ

ಉತ್ತೇಜನ ಅಂದರೆ ಯಾವರೀತಿ ಉತ್ತೇಜನ ನೀವು ಹೇಳೋದೂ?

ಚಂದು

ಉತ್ತೇಜನ ಅಂದರೆ, ನಿಮ್ಮಂಥಾವರು ನಾಟಕ ಕಲೆಗೇ ಗಮನ ಕೊಟ್ಟು, ಜೀವನವನ್ನೆಲ್ಲ ನಾಟಕಕ್ಕೇ ಮೀಸಲಾಗಿಡೋದಕ್ಕೆ ಅವಕಾಶ ಉಂಟುಮಾಡಬೇಕು ಅಂತ ನಾ ಹೇಳೋದು.

ನಾಣಿ

ಜೀವನವನ್ನೆಲ್ಲ ನಾಟಕಕ್ಕೇ ಮೀಸಲಾಗಿಡೋದು!! ಎಷ್ಟು ಚನ್ನಾಗಿರುತ್ತೆ!! ಹಾಗೇ ಮಾಡಬೇಕು........ಆದರೆ ಅದಕ್ಕೆ ಬೇರೆಯವರು ಅವಕಾಶ ಉಂಟುಮಾಡೋದೇನಿದೆ? ನಮ್ಮ ಜೀವನ ನಾವು ಹೇಗೆ ಬೇಕಾದರೂ ಮಾಡಿಕೋಬಹುದು, ಅಲ್ವೇ?

ಚಂದು

ನಿಮಗೆ ಅಷ್ಟು ಸ್ವಾತಂತ್ರ್ಯ ಯಾರು ಕೊಡ್ತಾರೆ? ನೋಡೀ, ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡಿ ಕೂಡಿಸಿಬಿಡ್ತಾರೆ. ಮದುವೆ ಆದ ಮೇಲೆ ಇನ್ನು ಕಲೆಯೂ ಇಲ್ಲ, ಸಾಹಿತ್ಯವೂ ಇಲ್ಲ, ನಾಟಕವೂ ಇಲ್ಲ. ಸಂಸಾರ ತಾಪತ್ರಯ ಹತ್ತಿಬಿಡುತ್ತೆ.

ನಾಣಿ

ಹಾಗಾದರೆ ಮದುವೆ ಮಾಡಿಕೊಂಡರೆ ಸುಖವಿಲ್ಲಾಂತೀರಾ?

ಚಂದು

ಮಾಡಿಕೋಬೇಕಾದವರು ಮಾಡಿಕೊಳ್ಳೋ ಕಾಲದಲ್ಲಿ ಮಾಡಿಕೊಂಡರೆ ಸುಖವೇನ್ನಿ.

ನಾಣಿ

ಇದನ್ನೆಲ್ಲ ನಾನು ಯೋಚನೆ ಮಾಡೇ ಇರಲಿಲ್ಲ. ಮದುವೆ ಮಾಡಿ

ಕೋಬೇಕಾದೋರು ಯಾರು? ಮಾಡಿಕೊಳ್ಳೋ ಕಾಲ ಯಾವುದು? ಸ್ವಲ್ಪ ಹೇಳಿ ಕೇಳೋಣ.

ಚಂದು

ಕೇಳಿ ಹಾಗಾದರೆ. ಈಗ, ನಮ್ಮ ರಮೇಶ ಇದಾನೆ. ಸಾಮಾನ್ಯ ಯುವಕ. ಸ್ವಲ್ಪ ಓದು ಬರೆಹ ಕಲಿತಿದ್ದಾಗ್ಯೂ ಸಹ, ನಿಮ್ಮ ಹಾಗೆ ಕಲೋಪಾಸಕನಲ್ಲ. ಅವನಿಂದ ನಾಟಕಕಲೆ ಮುಂದು ವರಿದೀತೇ? ದೇಶಕ್ಕೇನಾದರೂ ಉಪಯೋಗವೇ? ಅವನು ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡಿಕೊಂಡು ಮೂಲೆಗೆ ಕೂತರೂ ಬಾಧಕವಿಲ್ಲ. ಆದರೆ ನಿಮ್ಮಂಥಾವರು ಈಗಲೇ ಮದುವೆ ಮಾಡಿಕೊಂಡು ನಾಟಕ ಕೈಬಿಟ್ಟರೆ, ಸಾಹಿತ್ಯಕ್ಕೆಷ್ಟು ನಷ್ಟ, ದೇಶಕ್ಕೆಷ್ಟು ನಷ್ಟ!........ತಮಗಿನ್ನೂ ಮದುವೆ ಆಗಿಲ್ಲತಾನೆ?

ನಾಣಿ

ಈಗ ಮಾಡಬೇಕೂಂತ ಇದಾರೆ—ಜಯೂ ಮದುವೇ ಜೊತೇಲಿ.

ಚಂದು

ನಿಮಗೆ ಸರಿಯಾದ ಕನ್ಯೇನಾದರೂ ಸಿಕ್ಕಿದೆಯೋ?....ಏಕೇಂದ್ರೇ, ನಾಟಕದಲ್ಲಿ ಅಭಿರುಚಿ ಇರೋ ಹೆಂಡತಿ ಆದರೆ ನಿಮಗೆ ಸರಿ ಹೋಗುತ್ತೆ.

ನಾಣಿ

ಅದೇ, ಮನೇಲಿ ಕೋಳೀಕಾಲ್ಹಾಕ್ಕೊಂಡು ಓಡಾಡ್ತಾ ಇದಾಳಲ್ಲ, ಆ ನಳಿನೀಂತ, ನಮ್ಮ ಅಕ್ಕನ ಮಗಳು, ಅವಳೇನಂತೆ ಕನ್ಯೆ ನನಗೆ! ಮಹಾಜಂಭ ಅವಳದು. ತಾನೇ ರತಿ, ಮಹಾ ಬುದ್ಧಿವಂತೆ, ನಾನು ಅಂದರೆ ಕೆಲಸಕ್ಕೆ ಬಾರದೋನು ಅಂತ ತಿಳುಕೊಂಡಿದಾಳೆ.

ಚಂದು

ಅದೇ, ಆ ಜಯಮ್ಮನ ಜೊತ್ತೇಲಿ ಓಡಾಡ್ತಾ ಇರ್ತಾಳಲ್ಲ, ಆ ಮೊದ್ದು ಹುಡುಗೀನೇ? ಪಾಪ, ನಿಮ್ಮ ವಿಚಾರ ಅವಳಿಗೆ ಅರ್ಥ ವಾಗಬೇಕಾದರೆ ಏಳು ಜನ್ಮ ತಾಳಿ ಬರಬೇಕು. ನೀವೇನಾದರೂ ಹೇಳಿ, ನಿಮಗೆ ಸರಿಯಾದ ಜೊತೆ ಅಲ್ಲ ಬಿಡಿ; ನಾನೊಪ್ಪಲಿಲ್ಲ. ಸ್ವಾಮೀ, ನಿಮ್ಮ ಗತೀನೂ ಹೀಗೇ ಆಗ್ಹೋಯ್ತೇ?

ನಾಣಿ

ಯಾಕೆ? ಏನಾಗಿದೆ ಈಗ ನನ್ನ ಗತಿ!?

ಚಂದು

ಸ್ವಲ್ಪ ಮುಂದಕ್ಕೆ ಯೋಚನೆಮಾಡಿ, ನಿಮಗೇ ಗೊತ್ತಾಗುತ್ತೆ. ನೋಡಿ, ನನ್ನ ಸ್ನೇಹಿತ ಒಬ್ಬ ಇದಾನೆ. ಅವನ ಜ್ಞಾಪಕ ಬರುತ್ತೆ, ನಿಮ್ಮನ್ನ ನೋಡಿದರೆ. ಅವನ ವಿಷಯ ಸ್ವಲ್ಪ ಕೇಳಿ. ಆಗ ನಿಮಗೇ ಗೊತ್ತಾಗುತ್ತೆ—ನಿಮ್ಮ ಗತಿ ಏನಾಗಿದೇನ್ನೋದು.

ನಾಣಿ

ಯಾರು ಅವರು? ಅವರ ವಿಷಯ ಏನು?

ಚಂದು

ಅವನ ಹೆಸರು ಯಶೋನಾಥ ಅಂತ.

ನಾಣಿ

ಯಶೋನಾಥ!!........ತುಂಬಾ ಹೆಸರುವಾಸೀಂತ ಕಾಣ್ಸುತ್ತೆ.

### ಚಂದು

ನಿಮ್ಮಹಾಗೇ ನಾಟಕ ಕಲೇಲಿ ನಿಪುಣ. ನೀವೂ ಕೇಳಿರಬಹುದು ಅವನ ಹೆಸರು. ಕೆಲವು ವರ್ಷಗಳ ಹಿಂದೆ ಅವರ ಮನೆಯವರು ಅವನಿಗೆ ಮದುವೆ ಮಾಡೋ ಪ್ರಯತ್ನ ಮಾಡಿದರು. ಯಾವುದೋ ಒಂದು ಸೋದರಿಕೆ ಸಂಬಂಧ ಅಂತ ಒಂದು ಮೊದ್ದು ಹುಡುಗೀನ ನಿಶ್ಚಯ ಮಾಡಿದರು. ಆದರೆ ಅವನು ಧೈರ್ಯ ಮಾಡಿ, 'ನಾನು ಮದುವೇ ಆಗೋಲ್ಲಾ' ಅಂತ ಒಂದೇ ಹಠ ಹಿಡಿದುಬಿಟ್ಟ. ಮದುವೆ ನಿಂತ್ಹೋಯ್ತು. ಇದರಿಂದ ಕೆಲವರಿಗೆ ಕೋಪ ಬಂತು ಅವನ ಮೇಲೆ. ಬೇಕಾದವರಿಗೆ ಕೋಪ ಬರಲಿ ಅಂದುಕೊಂಡು, ನಾಟಕದಲ್ಲಿ ಹೆಸರು ಪಡೆಯಬೇಕು ಅನ್ನೋ ಒಂದೇ ಮನಸ್ಸಿನಿಂದ, ತನ್ನ ಪಾಲಿಗೆ ಬಂದ ಪಿತ್ರಾರ್ಜಿತವಾದ ಸ್ವತ್ತನ್ನೆಲ್ಲ ಖರ್ಚು ಮಾಡಿ ಒಂದು ನಾಟಕ ಸಂಸ್ಥೆಯನ್ನು ಸ್ಥಾಪಿಸಿದ. ಹೆಸರಾದ. ಆಮೇಲೆ ಸಿನಿಮಾ ಸಂಸ್ಥೆಗಳವರಿಗೆ ಅವನ ಮೇಲೆ ಗಮನ ಬಿತ್ತು. ಅಲ್ಲಿಂದ ತಕ್ಕೊಳ್ಳಿ ಅವನ ಅದೃಷ್ಟ! ಸಿನಿಮಾ ಸ್ಟಾರ್ ಆಗಿ ಲಕ್ಷಾಂತರ ರೂಪಾಯಿ ಸಂಪಾದಿಸಿ, ಈಗ ಒಬ್ಬ ಸಿನಿಮಾ ತಾರೆಯನ್ನು ಮದುವೆಯಾಗಿದ್ದಾನೆ. ಆಗ ಕೋಪ ಮಾಡಿಕೊಂಡ ಬಂಧುಗಳೆಲ್ಲಾ ಈಗ ರಾಜಮರ್ಯಾದೆ ಮಾಡ್ತಾರೆ. ಆಗ ಅವರಿಗೆ ಹೆದರಿ ಅವನೇನಾದರೂ ಆ ಮೊದ್ದು ಹುಡುಗೀನ ಮದುವೇ ಆಗಿದ್ದರೆ, ಈ ವೇಳೆಗೆ ಬಡತನದಲ್ಲಿ ಬೆಂದು ನರಳುತಾ ಇರಬೇಕಾಗ್ತಿತ್ತು.

### ನಾಣಿ

ನೀವು ಹೇಳೋದೆಲ್ಲ ಕೇಳಿದರೆ ಏನೇನೋ ಯೋಚನೆಗಳು ಬರ್ತಾ ಇವೆ ನನಗೆ. ಈಗ ಗೊತ್ತಾಯ್ತು — ಈಗ ಮದುವೇ ಮಾಡಿ

ಕೊಂಡ್ರೆ ನನ್ನ ಗತಿ ಏನಾಗುತ್ತೇನ್ನೋದು........ನಿಮ್ಮ ಸ್ನೇಹಿತನೋ ಆ ಯಶೋನಾಥ?

ಚಂದು

ನನಗೂ ಅವನಿಗೂ ಬಾಲ್ಯದಿಂದ ಸ್ನೇಹ. ಇಲ್ಲಿ ನೋಡಿ, ಮೊನ್ನೆ ತಾನೇ ಕಾಗದ ಬರೆದಿದಾನೆ. [ಎನ್ನುತ್ತ ಜೇಬಿನಿಂದ ಕಾಗದ ತೆಗೆಯುವನು] ವಸಂತಾ ಮೂವೀಟೋನೋರೂ ಶರಚ್ಚಿತ್ರದೋರೂ ಜಗಳಕಾಯ್ತಾ ಇದ್ದಾರಂತೆ: ನಾವು ಎರಡು ಲಕ್ಷ ಕೊಡ್ತೀವಿ, ನಾವು ಮೂರು ಲಕ್ಷ ಕೊಡ್ತೀವಿ ಅಂತ! ಅವರವರಲ್ಲೇ ಪೈಪೋಟಿ. ಓದಿನೋಡಿ, ನಿಮಗೇ ಗೊತ್ತಾಗುತ್ತೆ. [ಕಾಗದವನ್ನು ನೀಡುವನು.]

ನಾಣಿ

ಇಲ್ಲ, ಇಲ್ಲ, ನೀವೇ ಓದಿ........ಎಹೆಹೆಹೆ. [ಎನ್ನುತ್ತ ಎದ್ದು (ಯ) ಎಂಬಲ್ಲಿಗೆ ಬರುವನು.]

ಚಂದು

ನೀವು ಓದಿ ಸ್ವಾಮೀ. [ಎನ್ನುತ್ತ ನಾಣಿಯನ್ನು ಹಿಂಬಾಲಿಸುವನು.]

ನಾಣಿ

[ನಿರುಪಾಯನಾಗಿ] ಇಲ್ಲಿ ಕೊಡಿ ಹಾಗಾದರೆ. [ಕಾಗದವನ್ನು ಬೆಳಕಿಗೆ ಹಿಡಿದು, ತಿರುಗಿಸಿ ತಿರುಗಿಸಿ ನೋಡಿ, ತನ್ನಲ್ಲಿ] ಇದೊಳ್ಳೇ ಪರೀಕ್ಷೆಗೆ ಬಂತಲ್ಲಾ! ಅಕ್ಷರಗಳನ್ನು ಬಿಡಿಸಿ ಬಿಡಿಸಿ ಬರೆದರೆ ಹ್ಯಾಗಾದರೂ ಮಾಡಿ ಓದಬಹುದು. ಹೀಗೆ ಗೀಚಿದರೆ ಯಾವ ಬ್ರಹ್ಮದೇವರಿಗೆ ಅರ್ಥವಾಗಬೇಕು? ........ ಇದೇನು, ಈ ಅಕ್ಷರಾ?........ಓ—ಹೌದು, ಒ, ಓ, ಔ! ಇದು ಓನೇ... ....ಇಲ್ಲಿ ಬರೆದಿರೋದು? ........ರೋ.........ರೋನೋ ಅಲ್ಲವೋ, ಯಾರಿಗ್ಗೊತ್ತು? ರೋ ಅಂತ್ಲೇ ಇಟ್ಟುಕೊಳ್ಳೋಣ. ಆದಾಗ್ಯೂ, ಇವೆರಡರ ಮಧ್ಯೆ ಇರೋ

ಸರಪಣಿ?........[ಚಂದೂಗೆ] ಇದೇನು ಕನ್ನಡದಲ್ಲೇ ಬರೆದಿದ್ದಾರೋ? [ಎನ್ನುತ್ತ ಕಾಗದವನ್ನು ಚಂದೂಗೆ ಕೊಡುವನು.]

**ಚಂದು**

[ (೮) ಎಂಬಲ್ಲಿ ಬಂತು, ತನ್ನಲ್ಲಿ] ಈ ಪ್ರವೀಣನಿಗೆ ಕನ್ನಡ ಯಾವುದೋ ಇಂಗ್ಲಿಷ್ ಯಾವುದೋ, ಓ ಯಾವುದೋ, ಠೋ ಯಾವುದೋ, ಒಂದೂ ಗೊತ್ತಿಲ್ಲ!........[ನಾಣೀಗೆ] ಸ್ವಾಮೀ, ಇದನ್ನ ಇಂಗ್ಲಿಷ್ನಲ್ಲಿ ಬರೆದಿದ್ದಾರೆ. ಯಶೋನಾಥನ್ನ ಸಿನಿಮಾದೋರು ಕರೆದ ವಿಚಾರ ಹೇಳಿದೆನಲ್ಲ—ಅದನ್ನೇ ಬರೆದಿದಾರೆ. ಓತ್ತೀನಿ ಕೇಳಿ:

Twinkle, twinkle, little star!
How I wonder what you are!
That you cannot read a letter small,
Having grown so tall!

ಅಂದರೆ: "ಪ್ರಿಯ ಸಖನೇ, ಕೊನೆಗೆ ವಸಂತಾ ಮೂವೀಟೋನಿನೋರ ಆಹ್ವಾನವನ್ನು ಮೂರೂವರೆ ಲಕ್ಷಕ್ಕೆ ಮನ್ನಿಸಿದ್ದೇನೆ. ಆದರೆ ನನ್ನ ಜೊತೆಗೆ ಸಖನ ಪಾತ್ರಕ್ಕೆ ಒಬ್ಬ ಆಸಾಮಿ ಬೇಕಾಗಿದೆ. ಯಾರನ್ನಾದರೂ ನೋಡಿ ಬಿಡಿ. ಕಾಂಚನಲತೆ—ಅಂದರೆ ಅವನ ಹೆಂಡತಿ—ಸಹ ಅದೇ ಚಿತ್ರಕ್ಕೆ ಎರಡು ಲಕ್ಷಕ್ಕೆ ಆಹ್ವಾನಿತಳಾಗಿದ್ದಾಳೆ. ಚಿತ್ರ ತೆಗೆಯೋದಕ್ಕೆ ನಾಳೆ ಬೇಸಗೇಲಿ ಹಿಮಾಲಯಾ ಪರ್ವತಕ್ಕೆ ಹೋಗ್ತೇವೆ. ನೀನೂ ಬಂದರೆ ಚನ್ನಾಗಿರುತ್ತೆ.— ಇಂತು ನಿನ್ನವ, ಯಶೋನಾಥ್" ........ ರುಜು ಮಾಡಿದಾನೆ ನೋಡಿ.

**ನಾಣಿ**

ಆಹಹ! ಎಂಥಾ ಸಮಾಚಾರ ಸ್ವಾಮಿ ಇದು! ಗಂಡ, ಹೆಂಡತಿ

ಇಬ್ಬರೂ ಹಿಮವತ್ಪರ್ವತಕ್ಹೋಗಿ ಐದೂವರೆ ಲಕ್ಷ ರೂಪಾಯಿ ತರೋದೂಂದ್ರೇನು ಸಾಮಾನ್ಯವಾಯ್ತೇ?........ಅಲ್ದೇ, ಇಂಗ್ಲಿಷ್ ಭಾಷೆ ಕೇಳೋಕೆ ಚನ್ನಾಗಿರುತ್ತೆ. ಅದೇನೋ 'ಸ್ಟಾರ್' ಅಂತ ಓದಿದಿರಲ್ಲಾ, ಹಾಗಂದರೆ?

**ಚಂದು**

'ಸಿನಿಮಾ ಸ್ಟಾರ್' ಅಂತ.

**ನಾಣಿ**

ಓಹೋ!........ಮತ್ತೆ ಅದೇನೋ 'ಟಾಲ್' ಅಂತ ಓದಿದಿರಲ್ಲಾ?

**ಚಂದು**

'ಟಾಲ್' ಅಂದರೆ ಹಿಮಾಲಯ ಪರ್ವತ ಅಂತ ಅರ್ಥ.

**ನಾಣಿ**

ಸರಿ, ಸರಿ.

**ಚಂದು**

ಯೋಚನೆ ಮಾಡಿ ನೋಡಿ ನಾರಾಯಣರಾಯರೇ, — ಬೇಕಾದರೆ ಆ ಸಖನ ಪಾತ್ರಕ್ಕೆ ನಿಮ್ಮ ಹೆಸರು ಬರೆದು ಕಳಿಸ್ತೀನಿ.

**ನಾಣಿ**

ಓಹೋ! ನಿಮಗಿನ್ನೂ ಚನ್ನಾಗಿ ಗೊತ್ತಿಲ್ಲಾಂತ ಕಾಣ್ಸುತ್ತೆ ನನ್ನ ಸಮಾಚಾರ. ಸಖನ ಪಾತ್ರ ಮಾಡೋವನಲ್ಲ ಸ್ವಾಮಿ ನಾನೂ. ಪಾರ್ಟ್ ಮಾಡೋದಾದ್ರೆ ರಾಜಾ ಪಾರ್ಟ್ ಮಾಡಬೇಕು; ಇಲ್ಲ ದಿದ್ದರೆ ಪಾರ್ಟ್ ಮಾಡೋದೇ ಬೇಡ. ಸಖನ ಪಾತ್ರ ಅಂದರೆ, ಎಷ್ಟೇ ಆಗಲಿ, ಎರಡನೇ ದರ್ಜೆ ಆಯ್ತು. ಹೌದೋ ಅಲ್ವೋ? ಆದರೆ ನಾನೀಗ ಪಾರ್ಟ್ ಮಾಡೋ ಯೋಚನೆ ಮಾಡ್ತಾ ಇಲ್ಲ.

ಒಂದು ಕಂಪೆನಿ ಕಟ್ಟಿ. ಆ ಯಶೋನಾಥನ್ನ ಮೀರಿಸೋ ಯೋಚನೆ ಮಾಡ್ತಾ ಇದೇನೆ ಸ್ವಂತ ಆಸ್ತೀನೂ ಇದೆ ನನಗೆ....... ಈ ನಳಿನೀನ ಕಟ್ಕೊಂಡು ಎಂಥಾ ಪ್ರಮಾದವಾಗ್ತಾ ಇತ್ತು! ದೇವರು ಬಂದ್ಹಾಗೆ ಬಂದ್ರಿ ನೀವು, ಸಮಯಕ್ಕೆ ಸರಿಯಾಗಿ.

**ಚಂದು**

ಮದುವೆ ವಿಚಾರವಾಗಿ ನಿಮ್ಮ ಅಕ್ಕ, ಭಾವ,.... ...

**ನಾಣಿ**

ಯಾರ ಮಾತೂ ಕೇಳೋದಿಲ್ಲ.

**ಚಂದು**

ಕೇಳೋದಿಲ್ಲ ಅಂದರೆ ಅಲ್ಲಿಗೇ ಬಿಡ್ತಾರೆಯೇ ಅವರೂ? ಏನಾದರೂ ಮಾಡಿ ಒಪ್ಪಿಸ್ತಾರೆ.

**ನಾಣಿ**

ನೋಡೀ, ....... ಒಂದು ಮಾತಿನೋನು ನಾನು. ಜೀವನದಲ್ಲಿ ಅದೊಂದು ನಿಯಮ ಇಟ್ಕೊಂಡಿದೀನಿ – ಮಾತಾಡಿದ ಮೇಲೆ ಅದನ್ನ ಬದಲಾಯಿಸಕೂಡದೂ ಅಂತ. ನಾನು ಮದುವೆಗೆ ಒಪ್ಪೋದಿಲ್ಲ ಅಂದ್ಮೇಲೆ ಮುಗೀತು; ನನ್ನ ಯಾರೂ ಒಪ್ಪ್ಸೋ ಹಾಗಿಲ್ಲ. ಭಾಳಾ ಗಟ್ಟಿ ನನ್ನ ಮನಸ್ಸು. ಕೇಳಿ: ಮೊನ್ನೆ ದಿವಸ ಆ ತೊರೇ ಗಡ್ಡೇಲಿರೋ ತೆಂಗಿನಮರ ಹತ್ತಬೇಕು ಅಂತ ಸಂಕಲ್ಪ ಮಾಡಿದೆ. ಮಧ್ಯೆ ಯಾರ್ಯಾರೋ ಬಂದು, ಬೇಡ ಅಂದರು. ಆದರೆ ಏನ್ಮಾಡ್ಲಿ, ಸಂಕಲ್ಪ ಮಾಡಿದ್ದಾಗಿಹೋಗಿತ್ತು. ಆದ್ದರಿಂದ ಯಾರೇನು ಹೇಳಿದರೂ ಕೇಳದೆ, ಎರಡು ಸಲ ಅಷ್ಟಷ್ಟು ದೂರ ಹತ್ತಿ ಬಿದ್ದರೂ ಲಕ್ಷಿಸದೆ, ಕೊನೆಗೆ ಅರ್ಧ ಹತ್ತಿದೆ. ಇಲ್ಲಿ ನೋಡಿ, ಬೇಕಾದರೆ, ಮುಂಗೈ

ಎಲ್ಲಾ ತಂದುಹೋಗಿರೋದು........ನೋಡಿದ್ರಾ ? ಇನ್ನೂ ಪೂರ್ತಿ ವಾಸಿಯಾಗಿಲ್ಲ. ಮತ್ತೆ ನಾಳೆ ಪೂರ್ತಿ ಹತ್ತೇ ತೀರುತೀನಿ, ಬಿಡೋದಿಲ್ಲ.

ಚಂದು

ಸಂತೋಷ. ಹತ್ತಬೇಕಾದ್ದೇ, ತೆಂಗಿನಮರವನ್ನ !

ನಾಣಿ

ಈಗಲಾದರೂ ಗೊತ್ತಾಯ್ತೇ ಸ್ವಾಮಿಾ ನನ್ನ ಮನಸ್ಸಿನ ಗಟ್ಟೀ? ಮದುವೇಗೆ ಒಪ್ಪಿಸ್ತಾರೇಂತ ಹೇಳ್ತೀರಲ್ಲಾ ! ಒಪ್ಪಿಸೋರು ಯಾರೂಂದೆ ?

ಚಂದು

ಹಾಗಾದರೆ ಸರಿ, ಒಪ್ಪಿದೆ. ಉತ್ತಮವಾದ ಸಂಕಲ್ಪ, ಸಂಕಲ್ಪಕ್ಕೆ ಸರಿಯಾದ ಮನೋದಾರ್ಢ್ಯ, ಮನೋದಾರ್ಢ್ಯಕ್ಕೆ ಸರಿಯಾದ ಸಾಧನೆ—ಈ ಎಲ್ಲಾ ಗುಣಗಳೂ ಒಬ್ಬರಲ್ಲೇ ಇರೋದು ವಿರಳ. ನಾನು ನೋಡಿದ್ದರಲ್ಲಿ ಆ ಯಶೋನಾಥ ಒಬ್ಬ, ಅವನ್ನ ಬಿಟ್ಟರೆ ನೀವೇ. ನಾಟಕಕಲೆಗೆ ನೀವಿಬ್ಬರು, ಕಲ್ಪವೃಕ್ಷಪ್ರಾಯರಾಗಿರೋರು. ಆದರೆ ನೀವೀಗ ಮದುವೆ ಮಾಡಿಕೊಂಡರೆ ಅವನೊಬ್ಬನೇ ಕಲ್ಪವೃಕ್ಷವಾಗ್ತಾನೆ.

ನಾಣಿ

ನಾನೀಗ ಮದುವೆ ಆಗೋದಿಲ್ಲಾನ್ನೋ ವಿಚಾರದಲ್ಲಿ ನಿಮಗಿನ್ನೂ ಏನಾದರೂ ಅನುಮಾನ ಇದ್ದರೆ, ಇಗೋ ನೋಡಿ, ಈ ಅರ್ಧ ರಾತ್ರೀಲಿ ನಿಮ್ಮ ಕೈಮೇಲೆ ಕೈಯಿಟ್ಟು ಒಂದೇ ಮನಸ್ಸಿನಿಂದ ನನ್ನ ದೃಢ ಸಂಕಲ್ಪವನ್ನು ಹೇಳ್ತೀನೆ........ಕೈ ಕೊಡಿ.

### ಚಂದು

[ಹಸ್ತವನ್ನು ನೀಡಿ] ಕೊಟ್ಟಿದ್ದೇನೆ ಕೈನಾ !... [ಕನ್ನಲ್ಲಿ] ಸಾಯಂಕಾಲ ನೀನು ನನಗೆ ಕೈ ಕೊಟ್ಟೆ. ಈಗ ನಾನು ನಿನಗೆ ಕೊಟ್ಟೆ !

### ನಾಣಿ

[ಚಂದುವಿನ ಕೈಮೇಲೆ ಕೈಯಿಟ್ಟು] ಕೇಳಿ ನನ್ನ ಈ ಸಂಕಲ್ಪವನ್ನ : "ನಾನು ನಮ್ಮ ಅಕ್ಕನಿಗಾಗಲಿ, ಭಾವನಿಗಾಗಲಿ ಹೆದರೋದಿಲ್ಲ. ನಳಿನೀನ ಕೈಬಿಟ್ಟು, ಅವಳ ಜಂಭಕ್ಕೆ ತಕ್ಕ ಶಾಸ್ತಿಯನ್ನೂ, ನನ್ನ ಮುಂದಿನ ಪ್ರಗತಿಗೆ ತಕ್ಕ ಮಾರ್ಗವನ್ನೂ ಮಾಡಿಕೋತೀನೆ. ಮೆಜಾರಿಟಿಗೆ ಬಂದ ಮೇಲೆ ನನ್ನ ಆಸ್ತಿಯಿಂದ ಒಂದು ನಾಟಕ ಕಂಪೆನಿ ಕಟ್ಟಿ ಆ ಯಶೋನಾಥನ್ನ ಹಿಮ್ಮೆಟ್ಟಿಸ್ತೀನೆ."

### ಚಂದು

ಇದೀಗ ಸ್ಥಿರವಾದ ಮಾತು........ಕನ್ನಡ ನಾಡಿನ ರಂಗಭೂಮಿಯೇ, ನಿನ್ನ ಅದೃಷ್ಟ ಇಂದಿಗೆ ಖುಲಾಯಿಸಿತು. ರಾಯರೇ, ಇಲ್ಲಿಂದ ಮುಂದೆ ತಮ್ಮ ಅಭಿವೃದ್ಧಿಯನ್ನ ದೇಶವೇ ನಿರೀಕ್ಷಿಸುತ್ತೆ.

### ನಾಣಿ

ಅಂತು ನನಗೆ ಸರಿಯಾದ ಮಾರ್ಗವನ್ನೇ ತೋರಿಸಿದ ಹಾಗಾಯ್ತು ನೀವು.

### ಚಂದು

[ಕನ್ನಲ್ಲಿ] ನಿನಗೆ ಸರಿಯಾದ್ದನ್ನೇ ಹೇಳಿದ್ದೇನೆ. [ನಾಣಿಗೆ] ರಾಯರೇ, ತಮಗಿನ್ನೂ ಊಟ ಆಗಿಲ್ಲಾಂತ ಕಾಣ್ಸುತ್ತೆ. ಊಟ ಮುಗಿಸಿ ಕೊಂಡು ಬನ್ನಿ, ನಿಧಾನವಾಗಿ ಮಾತಾಡೋಣ.

ನಾಣಿ

ಹಸಿವೂ ಆಗ್ತಾ ಇದೆ. ಅಡಿಗೇ ಮನೇಲಿ ಚಿರೋಟಿ, ಗಿರೋಟಿ, ಏನಾದ್ರೂ ಮುಚ್ಚಿಟ್ಟಿದ್ದಾರೇನೋ ನೋಡ್ತೀನೆ.

[ ನಿರ್ಗಮ (ಅ) : ನಾಣಿ.]

ಚಂದು

ಅಹ್ಹ ಹ್ಹ ಹ್ಹ !........[ಸ್ವಲ್ಪಕಾಲ ಮೌನ]........ಈ ಮಹಾರಾಯನ್ನ ಮದುವೆ ಆಗು ಅಂದರೆ ನಳಿನಿ ಹೇಗೆ ತಾನೇ ಒಪ್ಕೊಯ್ತಾಳು? ನಾನು ಇಲ್ಲಿಗೆ ರಮೇಶನ ಜೊತೆಯಲ್ಲಿ ಬಂದದ್ದೂ ಒಳ್ಳೇದೇ ಆಯ್ತು. ........[ಒಳಕ್ಕೆ ನೋಡಿ] ಓಹೋ, ನರಸಪ್ಪನೋರು ಬರ್ತಾ ಇದಾರೆ. ನಿದ್ರೆ ಬರಲಿಲ್ಲಾಂತ ಕಾಣ್ಸತ್ತೆ. ಹ್ಯಾಗೆ ಬರುತ್ತೆ, ಪಾಪ, ನಾಣಿ ಮಾಡಿರೋ ಅವಾಂತರದಲ್ಲಿ?

[ಪ್ರವೇಶ (ಅ) : ನರಸಪ್ಪ ಮತ್ತು ಭಾಗಮ್ಮ.]

[ನರಸಪ್ಪ (ಯ) ಎಂಬಲ್ಲಿಗೆ ಬರುವನು. ಭಾಗಮ್ಮ ಬಾಗಿಲಲ್ಲೇ ನಿಲ್ಲುವಳು.]

ನರಸಪ್ಪ

ತಮ್ಮಲ್ಲೇ ಮಾತನಾಡಬೇಕಾಗಿತ್ತೂ........ಏನೂ ಇಲ್ಲಾ........ ರಮೇಶರಾಯರು ಈಗಿನ ಕಾಲದೋರು; ನಾನು ಹಳೇಕಾಲ ದವನೂ, ಅವರು ಭಾಗ್ಯವಂತರು; ನಾನು ಬಡವ. ಹೀಗಿರೋವಾಗ, ನಮನಮಗೆ ಸಂಬಂಧ, ಅಷ್ಟಾಗೀ,........

ಚಂದು

[ಅವಸರವಾಗಿ ಹತ್ತಿರ ಹೋಗಿ] ನರಸಪ್ನೋರೇ, ನರಸಪ್ನೋರೇ, ನಿಮ್ಮ ನಾರಾಯಣರಾಯರೂ........

ನರಸಪ್ಪ

ನಮ್ಮ ನಾಣೀ ಮಾತು ಹಾಗಿರಲೀ ಸ್ವಾಮೀ; ಆದರೇ……

ಚಂದು

ನಾ ಹೇಳೋದು ಸ್ವಲ್ಪ ಕೇಳಿ.

ನರಸಪ್ಪ

ಇನ್ನು ಹೇಳಬೇಕಾದ್ದೂ ಇಲ್ಲ, ಕೇಳಬೇಕಾದ್ದೂ ಇಲ್ಲ. ರಮೇಶ ರಾಯರಿಗೆ ಒಂದು ಮಾತು ತಿಳಿಸಿಬಿಡಿ. ಏನೊಂದ್ರೇ…………

ಚಂದು

ಅದನ್ನ ಹೇಳಬೇಡೀ ಸ್ವಾಮೀ, ಸ್ವಲ್ಪ ಕೇಳಿ. ಒಂದ್ವೇಳೆ ನಿಮಗೇ ಪರಪಾಟಾಗಿದ್ದರೆ ನೀವೇನು ಮಾಡ್ತಾ ಇದ್ರೀ?

ನರಸಪ್ಪ

ಪರಪಾಟೊ!?

ಚಂದು

ಹೌದು. ಬೀಗರ ಮನೇನ ಹೊಟೇಲು ಅಂತ ಹೇಳಿದರೆ ಪರಪಾಟಾಗೋದಿಲ್ವೇ?

ನರಸಪ್ಪ

ಹೊಟೇಲೂ? ಯಾವುದು? ಹಾಗಂತ ಯಾರು ಹೇಳಿದವರು?

ಚಂದು

ನಿಮ್ಮ ನಾರಾಯ……..

ನರಸಪ್ಪ

ಎಲಾ ಪಾಪಿಷ್ಠಾ!…….ಅವನು ಮನೇಲೇ ಇಲ್ವಲ್ಲಾ!

ಚಂದು

ನಾವು ಬಂದಾಗ ಇಲ್ಲೇ ಇದ್ದರು.

**ನರಸಪ್ಪ**

ಮನೆಗೆ ಬರಲಿ........

**ಚಂದು**

ಈಗತಾನೇ ಮನೆಗೆ ಬಂದರು. ಮಾತನಾಡಿಸಿದೆ ಇಷ್ಟೊತ್ತೂ. ಒಳಕ್ಹೋಗಿದಾರೆ.

**ನರಸಪ್ಪ**

[ಭಾಗಮ್ಮನಿಗೆ] ಕೇಳಿದ್ಯೋ? ಈಗಲಾದರೂ ತಿಳೀತೋ ಇಲ್ವೋ ನಿನ್ನ ತಮ್ಮನ ಸಮಾಚಾರ?........ಛೆ, ಛೆ, ಛೆ, ಛೆ....... ರಮೇಶ ರಾಯರು ಎಷ್ಟು ಬೇಸರಪಟ್ಟುಕೊಂಡರೋ ಏನೋ.

**ಚಂದು**

ರಮೇಶನಿಗಿನ್ನೂ ನಿಜಾಂಶ ಗೊತ್ತಾಗಿಲ್ಲ. ನಿದ್ರೆ ಹೋಗಿದ್ದಾನೆ. ಅವನಿಗೆ ತಿಳಿಸೋದು ಹೇಗೇಂತ ಯೋಚನೆ ನನಗೆ

**ನರಸಪ್ಪ**

ಅವರ ಸಂಗಡ ನೀವೇ ಸರಿಯಾದ ರೀತಿಯಲ್ಲಿ ಮಾತನಾಡಿ ಸಮಾಧಾನ ಹೇಳಬೇಕು. ........ಅಹ್ಹಹ್ಹಹ್ಹ........ಈಗ ನಾನು ನಗಬೇಕೋ ಅಳಬೇಕೋ?

**ಚಂದು**

ನರಸಪ್ಪೋರೇ, ನಿಮಗೆ ಹೇಳಬೇಕಾದ್ದೇನಿದೆ? ನಕ್ಕುಬಿಡಬೇಕು ಜೀವನದಲ್ಲಿ ಅಲ್ಲಲ್ಲಿಗೆ ನಕ್ಕು ಮುಂದಕ್ಕೆ ಸಾಗಬೇಕು.

**ಕೆರೆಯಲ್ಲಿ**

[ಕುದುರೇ ಗಾಡಿ ಬಂದ ಸದ್ದಾಗುವುದು]

*

ಚಂದು

ಅದೇನು ಸದ್ದು? [ಹೊರಬಾಗಿಲ ಕಡೆ ನೋಡಿ] ಯಾವುದೋ ಕುದುರೇ ಗಾಡಿ ನಿಂತಿತಲ್ಲ ಮನೇ ಮುಂದೆ.

ನರಸಪ್ಪ

ನೀಲಕಂಠರಾಯರು ಬಂದಿರಬೇಕು

[ನಿರ್ಗಮ (ಅ) : ಭಾಗಮ್ಮ.]

ಚಂದು

ಅವರು ಬರೋ ನಿರೀಕ್ಷಣೆ ಇತ್ತೇನು? ಅವರು ನಮಗೆ ಹೇಳಲಿಲ್ಲ.

ನರಸಪ್ಪ

ನಮ್ಮ ಪುರೋಹಿತರ ಮುಂದೆ ಹೇಳಿದ್ದರಂತೆ: "ಸಾಧ್ಯವಾದರೆ ಬರ್ತೀವಿ" ಅಂತ. [ಹೊರಕ್ಕೆ ಹೋಗುತ್ತ] ಇಲ್ಲಿ ನಡೆದಿರೋದೆಲ್ಲ ಕೇಳಿದರೆ ಎಷ್ಟು ನಗುತಾರೋ ನೀಲಕಂಠರಾಯರು! ಅಹ್ಹ ಹ್ಹ ಹ್ಹ.

[ನಿರ್ಗಮ (ಅ) : ನರಸಪ್ಪ.]

ಚಂದು

[ಕನ್ನಲ್ಲಿ] ಇಂಥಾ ಅನುಭವ ಯಾರಿಗೂ ಬೇಡ. ಯಾರ ಮನೆಯಲ್ಲಿ ಅತಿ ವಿತರಣೆಯಿಂದ ಇರಬೇಕಾಗಿತ್ತೋ ಅಲ್ಲೇ ಇಷ್ಟು ವಿಪರೀತವಾಗಿ ಹೋಯಿತು! ರಮೇಶ್, ರಮೇಶ್, ಈಗ ನಿನ್ನ ಪಾಡೇನು? ಚರಿತ್ರೆಗೆ ಸೇರಿ ಹೋಯ್ತಲ್ಲಾ ನಿನ್ನ ಕಥೆ!

[ಪ್ರವೇಶ (ಇ) : ರಮೇಶ್.]

ರಮೇಶ್

[ಕಣ್ಣುಜ್ಜಿಕೊಳ್ಳುತ್ತ ಬಂದು] ಕೂಗಿದೆಯಾ ಚಂದು? ಏನು?

ಚಂದು

ರಮೇಶ್, ನಾವಿಲ್ಲಿಗೆ ಬರುತ್ಲೂ, ಕುದುರೆಗೆ ಹುರುಳಿ ಹಾಕೆಂದೆ ಯಲ್ಲವೇ ನೀನು ?

ರಮೇಶ್

ಹೌದು. ಅದನ್ನೇಕೆ ನೆನೆಸಿಕೊಂಡೆ?

ಚಂದು

ಸ್ವಲ್ಪ ಟೀ ತರಿಸಿ ಅಂದೆಯಲ್ಲವೆ?

ರಮೇಶ್

ಅಂದರೇನಾಯಿತು ?

ಚಂದು

ಚಕ್ಲಿ ಚನ್ನಾಗಿಲ್ಲಾಂತ ಆಕ್ಷೇಪಿಸಿದೆಯಲ್ಲವೆ ?

ರಮೇಶ್

ಸಾರಿಗೆ ಉಪ್ಪು ಜಾಸ್ತಿ ಅಂತಲೂ ಆಕ್ಷೇಪಿಸಿದೆ. ಆದರೇನು? ದುಡ್ಡು ಕೊಡ್ತಾರೋ ಇಲ್ವೋ ಅಂತ ಅನುಮಾನಿಸಿದರೇನು ಆ ಮಾಲೀಕರು? ಕೊಟ್ಟುಬಿಡೋಣ ಪಾಪ

ಚಂದು

ಅದೊಂದು ಬಾಕಿ ಇದೆ ರಮೇಶ್. ನರಸಪ್ಪನೋರ ಕೈಯಲ್ಲಿ ದುಡ್ಡು ಹಾಕಿಬಿಡು. ಅಲ್ಲಿಗೆ ಎಲ್ಲಾ ಪೂರ್ತಿಯಾಗುತ್ತೆ.

ರಮೇಶ್

ನರಸಪ್ಪ? ಯಾವ ನರಸಪ್ಪ ?

ಚಂದು

ಯಾವ ನಾಣಿ ಈ ಮನೆಯನ್ನು ಹೊಟೇಲೆಂದು ಹೇಳಿ ನಮಗೆ ಗಸ್ತುಕೊಟ್ಟನೋ, ಆ ನಾಣಿಯ ಅಕ್ಕನ ಗಂಡ ನರಸಪ್ಪ; ಯಾವ

ನರಸಪ್ಪನನ್ನು ಇಷ್ಟು ಹೊತ್ತೂ ಹೋಟೇಲು ಮಾಲೀಕನೆಂದು ನಾವು ತಿಳಿದಿದ್ದೆವೋ ಆ ಜಹಗೀರ್ದಾರ್ ನರಸಪ್ಪ; ಯಾವ ನರಸಪ್ಪನ ಅಭಿಮುಖವಾಗಿ ನಿಮ್ಮ ತಂದೆ ನಮ್ಮನ್ನು ಕಳಿಸಿದರೋ ಆ ನಿಮ್ಮ ಮಾವ ನರಸಪ್ಪ. ಅರ್ಥವಾಯ್ತೆ ?

**ರಮೇಶ್**

ಏನು ! ಇದು ರಾಯಾಪುರದ ನರಸಪ್ಪನೋರ ಮನೇನೇ ?

**ಚಂದು**

ಅನುಮಾನವೇ ಇಲ್ಲ. ಮೊದಲು ನಾವು ಮಾತನಾಡಿಸಿದೆವಲ್ಲಾ ಅವನೇ ನರಸಪ್ಪನೋರ ಹೆಂಡತೀ ತಮ್ಮ — ನಾಣಿ.

**ರಮೇಶ್**

ನಾಣೀ ಮನೆ ಹಾಳಾಗಾ.

**ಚಂದು**

ಅವನಿಗೆ ಈಗ ಸಧ್ಯ ಮನೆ ಮಠ ಒಂದೂ ಇಲ್ಲ ........ ಎಂಥಾ ಕುಚೇಷ್ಟೆ ಮಾಡಿದಾನೆ ನೋಡಿದೆಯಾ ?

**ರಮೇಶ್**

ಚಂದೂ, ಇನ್ನು ನಾನಿಲ್ಲಿ ಯಾರಿಗೂ ಮುಖ ತೋರಿಸಲಾರೆ. ಈಗಲೇ ಇಲ್ಲಿಂದ ಹೊರಟುಹೋಗೋಣ. ಗಾಡಿ ಕಟ್ಟಿಸ್ತೀನೆ.

[ಎನ್ನುತ್ತ ಹೊರಕ್ಕೆ ಹೋಗುತ್ತಿರುವನು.]

**ಚಂದು**

ಸ್ವಲ್ಪ ತಾಳು. ಮೂವರೂ ಒಟ್ಟಾಗಿ ಹೋಗೋಣ.

**ರಮೇಶ್**

ಇನ್ನೊಬ್ಬರು ಯಾರು ?

### ಚಂದು

ನಿಮ್ಮ ತಂದೆಯುವರು; ಈಗ ತಾನೇ ಹೊರಗೆ ಬಂದಿಳಿದಿದಾರೆ. ಅಗೋ ಒಳಕ್ಕೆ ಬರ್ತಾ ಇದಾರೆ.

### ರಮೇಶ್

ಈಗೇನು ಮಾಡುವುದು? [ಎಂದು ಅವಸರವಾಗಿ ಕೊಠಡಿಯೊಳಕ್ಕೆ ಹೋಗುವನು.]

**[ನಿರ್ಗಮ (ಇ) : ರಮೇಶ್.]**

**[ಪ್ರವೇಶ (ಅ) : ನರಸಪ್ಪ ಮತ್ತು ನೀಲಕಂಠರಾಯರು.]**

[ನೀಲಕಂಠರಾಯರ ಕೈಯಲ್ಲಿ ಸೊಗಸಾದ ಬೆತ್ತವಿರುವುದು.]

### ನರಸಪ್ಪ

[ನಗೆ] ಓಹೋ ನೀಲಕಂಠರಾಯರೇ, ಏನು ಘೋರಣೆ ಮಾಡಿ ಬಿಟ್ರೊಂತೀರೀ!

### ನೀಲಕಂಠರಾಯರು

ಅಹ್ಹ ಹ್ಹ! ಪ್ರಾಯಶಃ ನೀವು ಆಡಿದ ಮಾತು, ಮಾಡಿದ ಉಪಚಾರ, ಎಲ್ಲಾ ಅಪಾರ್ಥ ಮಾಡಿಕೊಂಡಿರಬೇಕು ಅವರು!

### ನರಸಪ್ಪ

ಇದು ಬಹು ವಿಚಿತ್ರವಾದ ಊಟದ ಹೊಟೇಲೆಂದು ತೋರಿರಬೇಕು ಅವರಿಗೆ!........ಆದರೆ ಈಗ ನನ್ನ ಹೃದಯದಲ್ಲಿ ಸಂತೋಷವೊಂದು ವಿನಾ ಮತ್ತೆ ಯಾವ ಭಾವನೆಗೂ ಅವಕಾಶವಿಲ್ಲ. ನಮ್ಮ ಸ್ನೇಹ ಹೀಗೆ ಬಾಂಧವ್ಯವಾಗಿ ಪರಿಣಮಿಸಲೆಂಬ ನನ್ನ ಆಸೆ, ಇಂದಿಗೆ ನೆರವೇರಿತು.

### ನೀಲಕಂಠರಾಯರು

ಈ ಬಾಂಧವ್ಯ, ಈ ಸ್ನೇಹ, ಇತರೋಪ್ಯತಿಶಯವಾಗಿ ವಂಶಪಾರಂಪರ್ಯವಾಗಿ ಅಭಿವೃದ್ಧಿ ಹೊಂದಲೆಂಬುದೇ ನನ್ನ ಆಶಯ........ ಚಂದೂ, ರಮೇಶನೆಲ್ಲಿ?

### ಚಂದು

[ (ಇ) ಬಳಿಗೆ ಹೋಗಿ ] ರಮೇಶ್!.........ಇಲ್ಲೇ ಇದ್ದೀಯಾ? ಬಾ [ಎಂದು ಕೈಹಿಡಿದು ಬಲವಂತದಿಂದ ಕರೆತರುತ್ತಿರುವನು.]

**[ಪ್ರವೇಶ (ಇ) : ರಮೇಶ್.]**

### ರಮೇಶ್

ಚಂದೂ, ಬಲಾತ್ಕರಿಸಬೇಡ, ಕೈಬಿಡು. ಮುಖವನ್ನು ಯಾರಿಗೂ ತೋರಿಸಲಾರೆ.

### ನರಸಪ್ಪ

ಅವನ್ನ ಅಷ್ಟು ಹೆಚ್ಚಾಗಿ ಮನಸ್ಸಿಗೆ ಹಚ್ಚಿಕೊಳ್ಳೋದಕ್ಕೆ ದೊಡ್ಡ ವಿಷಯವೇನೂ ಅಲ್ಲ. ತಮಾಷೆ, ವಿನೋದ! ಅದಕ್ಕೆ ತಾವು ಅಷ್ಟು ಜುಗುಪ್ಸೆ ಪಟ್ಕೊಳ್ಳೋ ಬಾರದು.

### ನೀಲಕಂಠರಾಯರು

[ಯಾಜಮಾನ್ಯದಿಂದ] ಈಗ ಆಗಿರೋ ಅವಿವೇಕವೇ ಸಾಲದೇ? ಚಂದೂ, ನೀನು ಜೊತೇಲಿದ್ದೂ ಇಷ್ಟಕ್ಕೆ ಅವಕಾಶವಾಗಬಹುದೆ? ಹೊಟೇಲಿಗೂ ಮನೆಗೂ ಇರೋ ವ್ಯತ್ಯಾಸ ಗೊತ್ತಾಗ್ಲಿಲ್ವಲ್ಲ ನಿಮಗೆ!

### ರಮೇಶ್

[ನರಸಪ್ಪನಿಗೆ] ನನ್ನ ಅಪರಾಧಗಳನ್ನು ಮನ್ನಿಸಬೇಕು.

### ನರಸಪ್ಪ

ಅಪರಾಧ ಎಳ್ಳಷ್ಟೂ ಇಲ್ಲ. ತಾವು ಸಮಾಧಾನಚಿತ್ತರಾಗಿ. [ನೀಲಕಂಠರಾಯರು (ಟ) ಕುರ್ಚಿಯಲ್ಲೂ, ನರಸಪ್ಪ (ಠ) ಕುರ್ಚಿಯಲ್ಲೂ ಕುಳಿತುಕೊಳ್ಳುವರು.] ರಮೇಶ್ ಮತ್ತು ಚಂದು (ಚ) ಕುರ್ಚಿಯ ಬಳಿ ನಿಂತಿರುವರು.

## [ ಪ್ರವೇಶ (ಆ) : ಭಾಗಮ್ಮ, ಜಯು, ನಳಿನಿ, ನಾಣಿ.]

[ಭಾಗಮ್ಮ, ಜಯು, ನಳಿನಿ ಬಾಗಿಲ ಬಳಿಯಲ್ಲೇ ನಿಲ್ಲುವರು; ನಾಣಿ (ಲ) ಎಂಬಲ್ಲಿಗೆ ಬಂದು ನಿಲ್ಲುವನು.]

### ನಾಣಿ

ನಮಸ್ಕಾರ ಮಾಡು ಹೋಗೇ ಜಯೂ, ಎನ್ಬಿನ್ಮಾಣ ಮಾಡ್ತೀ? [ಜಯು ನೀಲಕಂಠರಾಯರಿಗೆ ನಮಸ್ಕರಿಸುವಳು.] ಹಾಗೇ ಇವರಿಗೂ ನಮಸ್ಕಾರ ಮಾಡು. [ಎಂದು ರಮೇಶನನ್ನು ತೋರಿಸುವನು. ರಮೇಶನು ಕಿರುನಗೆ ಸೂಚಿಸುವನು. ಜಯು ನಾಚಿಕೆಯಿಂದ ತಾಯಿಯ ಬಳಿ ಹೋಗಿ ನಿಲ್ಲುವಳು.]

### ನರಸಪ್ಪ

ನಳಿನಮ್ಮ, ಹಿರಿಯರು ಬಂದಿದಾರೆ. ನೀನೂ ನಮಸ್ಕಾರ ಮಾಡು ಬಾಮ್ಮ. [ನಳಿನಿ ನೀಲಕಂಠರಾಯರಿಗೆ ನಮಸ್ಕರಿಸುವಳು.]

### ನೀಲಕಂಠರಾಯರು

ನಳಿನಮ್ಮನ ಮದುವೇನೂ ಈಗಲೇ ಸಾಗಿಸಬೇಕು ಅಂತ ಬರೆದಿದ್ದಿರಲ್ವೆ ನರಸಪ್ಪನೋರೇ? ಈಗ ಎರಡು ಲಗ್ನಪತ್ರಿಕೆಗಳೂ ಒಟ್ಟಾಗೇ ಆಗಬಹುದಲ್ಲ.

ನಾಣಿ

[ಮೆಲ್ಲನೆ] ಒಂದೇನೋ ಆಗುತ್ತೆ. ಇನ್ನೊಂದು........ನಾ ಹೇಳ್ಲಾರೆ.
[ಭಾಗಮ್ಮ ನಾಣಿಯನ್ನು ಸಿಟ್ಟಿನಿಂದ ನೋಡುವಳು.]

ನರಸಪ್ಪ

ನಳಿನಮ್ಮನಿಗೆ ವರ ನಿಶ್ಚಯವಾಗಿಲ್ಲ ಬೇರೇ ಕಡೆ ನೋಡೋ ಮೊದಲು ನಮ್ಮ ನಾರಾಯಣರಾಯರು ಒಪ್ತಾರೋ ಇಲ್ವೋ ತಿಳೀಬೇಕು. ಸೋದರಿಕೆಯಾದ್ದರಿಂದ ಅವರು ಒಪ್ಪಿದರೆ ಚನ್ನಾಗಿರುತ್ತೆ–ಏನಪ್ಪ, ನಾಣಿ, ಏನ್ಹೇಳ್ತಿ?

[ನಾಣಿ ಯೋಚಿಸುತ್ತ ನಿಲ್ಲುವನು. ಆಗ ಚಂಡು, ಹಸ್ತವನ್ನು ತನ್ನ ಕೆನ್ನೆಯ ಮೇಲಿಟ್ಟುಕೊಂಡು, ತಲೆ ಹಾಕಿ, ಒಂದು ಸೀನು ಸೀನೆಂದು ನಳಿನಿಗೆ ಸಂಜ್ಞೆ ಮಾಡುವನು.]

ನಳಿನಿ

[ಗಟ್ಟಿಯಾಗಿ] ಆಂ ಕ್ಛಿ.

ನಾಣಿ

ಒಂಟಿ ಸೀನು!!........ಈ ಅಪಶಕುನ ಪಕ್ಷೀನ ನಾನು ಖಂಡಿತ ಮದುವೆ ಆಗೋದಿಲ್ಲಾ.

ಭಾಗಮ್ಮ

ಏನೋ ಅವಲಕ್ಷಣ ಆದ್ಹಾಗಾಯ್ತು. ಹೋಗ್ಲಿ ಬಿಡು, ಇನ್ನೂ ಒಳ್ಳೇ ಕನ್ಯೇನ ತಂದರಾಯ್ತು. ಮನಸ್ಸಿಗ್ಯಾಕೋ ಸರಿಹೋಗ್ಲಿಲ್ಲ.

ನರಸಪ್ಪ

ನನಗೂ ಯಾಕೋ ಮನಸ್ಸಿಗೆ ಸರಿಹೋಗ್ಲಿಲ್ಲ. ಇನ್ನೂ ಒಳ್ಳೇ ವರನ್ನ ನೋಡಿದರಾಯ್ತು.

ನೀಲಕಂಠರಾಯರು

ನನಗೂ ಯಾಕೋ ಮನಸ್ಸಿಗೆ ಸರಿಹೋಗ್ಲಿಲ್ಲ. ಆ ಮಾತು ಅಲ್ಲಿಗೆ ನಿಲ್ಲಲಿ.

ನಾಣಿ

ಹಾಗಾದ್ಮೇಲೆ ನಾನಿನ್ನು ಹೋಗಿ ಮಲಗ್ತೇನೆ. [ಒಳಕ್ಕೆ ಹೋಗುತ್ತ ತನ್ನಲ್ಲಿ] ನಾಳೆ ಬೆಳಗ್ಗೆ ಇನ್ನೂ ಎಷ್ಟೋ ಕೆಲಸ ಇದೆ; ಆ ತೆಂಗಿನಮರ ಬೇರೇ ಹತ್ತಬೇಕು.

[ನಿರ್ಗಮ (ಆ) : ನಾಣಿ.]

ನರಸಪ್ಪ

[ಯೋಚನೆಯಿಂದ (ಯ) ಎಂಬಲ್ಲಿಗೆ ಬಂದು] ಹಾಗಾದ್ಮೇಲೆ ನಳಿನ ಮ್ಮನಿಗೆ ಬೇರೆ ವರ ಗೊತ್ತುಮಾಡಬೇಕಾಯ್ತು... ....ಬೇರೆ ವರ ಯಾರಿದ್ದಾರೇ ?........

ಚಂದು

ಅಹ್ಹುಂ, ಅಹ್ಹುಂ [ಎಂದು ಕೆಮ್ಮುತ್ತ ಒಂದು ಹೆಜ್ಜೆ ಮುಂದಕ್ಕೆ ಬರುವನು.]

ನರಸಪ್ಪ

[ಅವನ ಕಡೆ ತಿರುಗಿ ನೋಡಿ ಯೋಚಿಸಿ, ನೀಲಕಂಠರಾಯರ ಬಳಿಗೆ ಹೋಗಿ, ಮೆಲ್ಲನೆ] ಸ್ವಲ್ಪ ಹೀಗೆ ಬನ್ನಿ [ಎಂದು (ಯ) ಬಳಿಗೆ ಕರೆತಂದು]........ ಅಂ........ಈ ಚಂದೂರಾಯರಿಗೆ ಮದುವೆ ಆಗಿದೆಯೇ ?

ನೀಲಕಂಠರಾಯರು

[ಮೆಲ್ಲನೆ] ನನ್ನ ಗಮನವೂ ಅವನ ಕಡೆಗೇ ಹೋಯಿತು. ವಿದ್ಯಾವಂತ, ಸ್ಥಿತಿವಂತ, ವಿವಾಹಕ್ಕೆ ಸಕಾಲ. ಅಭಿಪ್ರಾಯ ವಿಚಾರಿಸಿ ನೋಡೋಣ ತಾಳಿ........[ಶತಪಥ ಹಾಕುತ್ತ]............ಏನಯ್ಯಾ,

........ಚಂದ್ರೂ, ........ ಯಾರಾದರೂ........ವರ ಇದ್ದಾರೆಯೇ—ನಿನಗೆ ತಿಳಿದಹಾಗೆ?

### ಚಂದು

[ಅವಸರವಾಗಿ] ಓಹೋ, ಬೇಕಾದಷ್ಟು ಜನ ಇದಾರೆ. ಅಂಥಾ ಕನ್ಯೇನ ಯಾರಾದರೂ ಸಂತೋಷವಾಗಿ ಮದುವೇ ಮಾಡಿಕೋ ತೀನಿ—ಅಲ್ಲ, ಮದುವೆ ಮಾಡಿಕೋತಾರೆ ಅಂದೆ.

### ನೀಲಕಂಠರಾಯರು

[ಕಿರುನಗೆಯಿಂದ] ನೀ ಮೊದಲು ಹೇಳಿದ್ದೇಸರಿ, ಅಲ್ವೇ?

### ಚಂದು

ಎಹೆಹೆಹೆ,........ಬಾಯಿ ಜಾರಿತು.

### ನೀಲಕಂಠರಾಯರು

[ಮುಖ ನೋಡುತ್ತ] ಒಳ್ಳೇದೇ ಆಯ್ತು............ನೋಡೂ, ನೀನು ಸಮ್ಮತಿಸೋದಾದ್ರೆ, ಈಗ್ಲೇ ನಿಮ್ಮೂರಿಗೆ ನಮ್ಮ ಗಾಡಿ ಕಳಿಸಿ ನಿಮ್ಮ ಯಜಮಾನ್ರನ್ನ ಕರೆಸಬಹುದು. ರಮೇಶ, ನೀನು, ಇಬ್ರೂ ಜೊತೆಗಾರರು. ಇಬ್ಬರ ಮದುವೇನೂ ಒಟ್ಟಾಗೇ ಆಗಿಬಿಡ್ಲಿ. ಸರೀ ತಾನೆ?

### ಚಂದು

ಹಿರಿಯರ ಆಜ್ಞೆಗೆ ಪ್ರತಿಯಿಲ್ಲ.........ನೋಡೀ, ಹಿರಿಯರ ಆಜ್ಞಾ ಪಾಲನೆಗಾಗಿ........ಹಿಂದೆ........ತ್ರೇತಾಯುಗದಲ್ಲಿ....... ಶ್ರೀರಾಮ ಚಂದ್ರ, ಹದಿನಾಲಕ್ಕು ವರ್ಷಕಾಲ ವನವಾಸವನ್ನೇ ಅನುಭವಿಸಿದ! ........ಅಂಥಾದ್ದೂ,........ ನಾವು ಇಷ್ಟೂ ಮಾಡದೇ ಹೋದರೆ ಹ್ಯಾಗೆ?

ನೀಲಕಂಠರಾಯರು

[ತಲೆದೂಗುತ್ತ] ಊಹೂಂ!........ಸರಿ ನರಸಪ್ನೋರೇ ಇವರೂರಿಗೆ ಈಗಲೇ ಗಾಡಿ ಕಳಿಸಿಬಿಡೋಣವೇ?

ನರಸಪ್ಪ

[ಭಾಗಮ್ಮನ ಮುಖವನ್ನು ನೋಡುವನು. ಭಾಗಮ್ಮ ಸಮ್ಮತಿ ಸೂಚಿಸುವಳು] ಅಗತ್ಯವಾಗಿ ಆಗಬಹುದು............ [ಹೊರಕ್ಕೆ ನೋಡಿ] ಓಹೋ, ಪುರೋಹಿತರೂ ಬಂದರಲ್ಲ.

**[ಪ್ರವೇಶ (ಅ) : ಪುರೋಹಿತರು.]**

ನರಸಪ್ಪ ಮತ್ತು ನೀಲಕಂಠರಾಯರು

ಶಾಸ್ತ್ರಿಗಳಿಗೆ ನಮಸ್ಕಾರ.

ಪುರೋಹಿತರು

ನಮಸ್ಕಾರ, ನಮಸ್ಕಾರ. ತಮ್ಮ ಗಾಡಿ ನಮ್ಮ ಮನೇ ಮುಂದಿನ ಬೀದೀಲೇ ಬಂದದ್ದನ್ನ ನೋಡಿ, ಕೂಡಲೇ ಎದ್ದುಬಂದೆ.

ನೀಲಕಂಠರಾಯರು

ಬಹಳ ಸಂತೋಷ........ಕೂಡೋಣಾಗ್ಲಿ........

[ಪುರೋಹಿತರು (ಚ) ಕುರ್ಚಿಯಲ್ಲಿ ಕುಳಿತುಕೊಳ್ಳುವರು. ನೀಲಕಂಠ ರಾಯರು ಮತ್ತು ನರಸಪ್ಪ ಹಿಂದಿನಂತೆ ಕುಳಿತುಕೊಳ್ಳುವರು.]

ಪುರೋಹಿತರು

ಸಾಯಂಕಾಲ ಇಲ್ಲಿಂದ ಹೋದವನೇ ನೀವು ಕೊಟ್ಟ ಜಾತಕಗಳನ್ನ ಪರಿಶೀಲನೆ ಮಾಡಿದೆ. ಬಹಳ ಪ್ರಶಸ್ತವಾಗಿದೆ. ಮೂವತ್ತಾರು

ಗುಣ ಸಂಪೂರ್ಣವಾಗಿ ಬರುತ್ತೆ. ನನ್ನ ಅನುಭವದಲ್ಲಿ ಈ ವೇಳೆಗೆ ಸಾವಿರಾರು ಜಾತಕಗಳನ್ನ ನೋಡಿದ್ದೇನೇನ್ನಿ. ಆದರೆ ಇಷ್ಟು ಹೊಂದಿಕೆಯಾಗಿರೋ ಜಾತಕಗಳನ್ನ ನಾನು ನೋಡೇ ಇರಲಿಲ್ಲ.

**ನರಸಪ್ಪ** ಮತ್ತು **ನೀಲಕಂಠರಾಯರು**

ತಮ್ಮ ಆಶೀರ್ವಾದ.

**ನೀಲಕಂಠರಾಯರು**

ನಳಿನಮ್ಮನ ಜಾತಕಾನೂ ತೋರಿಸಿ ನರಸಪ್ನೋರೇ. [ಪುರೋಹಿತರಿಗೆ] ಆ ಮದುವೇನೂ ಈಗಲೇ ಸಾಗಿಸೋ ಯೋಚನೆ ಇದೆ.

**ಪುರೋಹಿತರು**

ಅಧಿಕಸ್ಯಾಧಿಕಂ ಫಲಂ. ತುಂಬಾ ಸಂತೋಷ.

**ನರಸಪ್ಪ**

[ಸಂಕೋಚದಿಂದ] ನಳಿನಮ್ಮನ ಜಾತಕ........ನಮ್ಮನೇಲಿಲ್ಲ.

**ಚಂದು**

ನನ್ನ ಜಾತಕಾನೂ ಕಳೆದ್ಹೋಗಿದೆ.

**ಪುರೋಹಿತರು**

ಓಹೋ, ಇವರೇನೋ ವರ?........ಸರಿ, ಸರಿ........ಇವರ ಹೆಸರು?

**ನೀಲಕಂಠರಾಯರು**

ಚಂದ್ರಶೇಖರರಾವ್ ಅಂತ.

**ಪುರೋಹಿತರು**

ಚಂದ್ರಶೇಖರರಾಯರು — ನಳಿನಮ್ಮ........ನಾಮ ನಕ್ಷತ್ರ ರೀತ್ಯಾ

ಸರ್ವೋತ್ತಮವಾಗಿದೆಯಲ್ಲಾ! ನಿಶ್ಚಿತಾರ್ಥಕ್ಕೆ ನಾಳೆ ದಿನ ಮುಹೂರ್ತವೂ ಪ್ರಶಸ್ತವಾಗಿದೆ. ಶುಭಸ್ಯ ಶೀಘ್ರಂ.

### ನರಸಪ್ಪ

ಶಾಸ್ತ್ರಿಗಳೇ, ಈ ಎರಡು ಲಗ್ನಗಳನ್ನೂ ನಡೆಸೋ ಭಾರ ತಮ್ಮದು. ನನಗೆ ಅನುಭವ ಕಡಮೆ. ಯಾವ ಯಾವುದು ಹ್ಯಾಗೆ ಹ್ಯಾಗೆ ಆಗಬೇಕೋ, ಯಾವ ಯಾವಾಗ ಏನೇನು ಮಾಡಬೇಕೋ, ಅದನ್ನ —ತಿಳಿದೋರು ತಾವು — ಅಪ್ಪಣೆ ಮಾಡಿದರೆ, ಅದರಂತೆ ನಾನು ನಡಕೋತೇನೆ........ನಾಳೆ ದಿವಸ ನಿಶ್ಚಿತಾರ್ಥ ಪ್ರಯುಕ್ತ ಯಾರು ಯಾರನ್ನ ಫಲತಾಂಬೂಲಕ್ಕೆ ಕರೀಬೇಕೋ, ಯಾರು ಯಾರನ್ನ ಭೋಜನಸಂತರ್ಪಣೆಗೆ ಕರೀಬೇಕೋ ನೋಡೋಣಾಗ್ಲಿ.

### ಪುರೋಹಿತರು

ಅಗತ್ಯವಾಗಿ ಆಗಬಹುದು. [ (ರ) ಎಂಬಲ್ಲಿ ನಿಂತು ಪ್ರೇಕ್ಷಕರಿಗೆ] ಮಹಿಳೆಯರೇ ಮತ್ತು ಮಹನೀಯರೇ, ನಾಳೆ ದಿನ, ಅಂದರೆ........ [ **ಈ ನಾಟಕವನ್ನಾಡುವ ಮಾರನೆಯ ತಾರೀಖನ್ನು ಹೇಳಿ**] ಈ ನರಸಪ್ಪನೋರ ಮನೇಲಿ ಎರಡು ಲಗ್ನಗಳ ನಿಶ್ಚಿತಾರ್ಥವಾದ್ದರಿಂದ, ತಾವುಗಳೆಲ್ಲರೂ ಬೆಳಗ್ಗೆ ಒಂಭತ್ತು ಘಂಟೆಗೆ ಫಲತಾಂಬೂಲಕ್ಕೂ, ಮಧ್ಯಾಹ್ನ ಹನ್ನೆರಡು ಘಂಟೆಗೆ ಸರಿಯಾಗಿ ಭೋಜನಸಂತರ್ಪಣೆಗೂ ದಯಮಾಡ್ಸಿ, ನರಸಪ್ಪನೋರ ಮನಸ್ಸಂತೋಷಪಡಿಸಬೇಕೂಂತ ಪ್ರಾರ್ಥನೆ.........ಸಂಸಾರ ಸಮೇತವಾಗಿ ಬನ್ನಿ.

**[ತೆರೆ ಬೀಳುವುದು]**

**ಸಂಪೂರ್ಣ**

# ಕ್ಷೀರಸಾಗರರ ಗ್ರಂಥಗಳು

---

ನಾಟಕಗಳು :

ನಿತ್ಯ ನಾಟಕ
ಅಥವಾ ಮನೆಯಲ್ಲೇ ಮ್ಯಾಟನೀ (ಏಕಾಂಕ ದೃಶ್ಯ)
ದೀಪಾವಳಿ ಅಥವಾ ಅಳಿಯನ ಅರೈವಲ್ ( ,, )
ಶ್ಯಾಮಣ್ಣನ ಸಾಹಸ ( ,, )
ನಿಶ್ಚಿತಾರ್ಥ ಅಥವಾ ಭರಚುಕ್ಕಿ ( ,, )
ನಮ್ಮೂರಿನ ಪಶ್ಚಿಮಕ್ಕೆ (ವಿಷಾದಾಂತ ಏಕಾಂಕ ದೃಶ್ಯ)
ಸಂಗೀತ ಸಾಮ್ರಾಜ್ಯ (ಚಿಕ್ಕನಾಟಕ. ಮಕ್ಕಳು ಆಡುವುದಕ್ಕೂ ಅನುಕೂಲವಾಗಿದೆ)
ಚಪ್ಪಾಳೇ ವೈದ್ಯ ( ,, )
ಮಲ್ಲಿಗೇ ಚಪ್ಪರ (ಏಕಪಾತ್ರಾಭಿನಯ ಮತ್ತು ಏಕಾಂಕ)
ಗಾಳೀ ಗೋಪುರ ( ,, )
ಇತ್ಯಾದಿ

ಜೀವನ ಚರಿತ್ರೆ:

ನೆಪೋಲಿಯನ್ ಬೋನಪಾರ್ಟೆ

ಕಥೆಗಳು ಮತ್ತು ಕವನಗಳು.

---

**ಸತ್ಯಶೋಧನ ಪುಸ್ತಕ ಭಂಡಾರ,**
ಕೋಟೆ, ಬೆಂಗಳೂರು ನಗರ.

